# ವೈಚಾರಿಕ ಪ್ರಜ್ಞೆಗೆ ಅಡೆತಡೆಗಳು





ಎಚ್. ನರಸಿಂಹಯ್ಯ
ನ್ಯಾಷನಲ್ ಕಾಲೇಜ್, ಬೆಂಗಳೂರು

**Extracts from The Complete Works of Swami Vivekananda**

I believe in reason and follow reason having seen enough of the evils of authority, for I was born in a country where they have gone to the extreme of authority.
(*Vol. 2, Page 336*)

Superstition is a great enemy of man, bigotry is worse.
(*Vol. 1, Page 15*)

Down with all superstitions! (*Vol. 1, Page 502*)

Be pure, give up all superstition and see the wonderful harmony of nature. Superstition gets the better of religion. (*Vol. 2, Page 483*)



But woe unto the man and woe unto the nation that forgets the real, internal, spiritual essentials of religion and mechanically clutches with death-like grasp at all external forms and never lets them go.
(*Vol. 3, Page 68*)

Let stars come, what harm is there? If a star disturbs my life, it would not be worth a cent. You will find that astrology and all these mystical things are generally signs of a weak mind; therefore as soon as they are becoming prominent in our minds, we should see a physician, take good food and rest.
(*Vol. 8, Page 184*)

# ವೈಚಾರಿಕ ಪ್ರಜ್ಞೆಗೆ ಅಡೆತಡೆಗಳು

ಡಾರ್ವಿನ್ ವಿಜ್ಞಾನಿಯ ವಿಕಾಸವಾದದಂತೆ ಮನುಷ್ಯನ ಮೂಲ ಅಮೀಬ – ಒಂದು ಜೀವಕಣ. ಲಕ್ಷಾಂತರ ವರ್ಷಗಳಲ್ಲಿ ಈ ಜೀವಕಣ ಬೆಳೆದು ವಿವಿಧ ಘಟ್ಟಗಳ ಪ್ರಾಣಿ ವರ್ಗಗಳನ್ನು ಹಾದು ಈ ಬುದ್ಧಿಜೀವಿ ಮನುಷ್ಯಾವತಾರವನ್ನು ತಾಳಿದೆ. ಈ ಬೆಳವಣಿಗೆಯ ಕಥೆ ಅದ್ಭುತವಾದದ್ದು, ರೋಮಾಂಚಕಾರಿಯಾದದ್ದು.

ಪ್ರಾಣಿಗಳಿಗೂ ಮತ್ತು ಮನುಷ್ಯನಿಗೂ ಇರುವ ಮುಖ್ಯ ವ್ಯತ್ಯಾಸ ವಿವೇಚನೆ ಮತ್ತು ವಾಕ್ ಶಕ್ತಿ. ಉಳಿದ ಎಷ್ಟೋ ವಿಷಯಗಳಲ್ಲಿ ಮನುಷ್ಯ, ಪ್ರಾಣಿಗಿಂತ ಕೀಳು. ಬಹುಪ್ರಾಣಿಗಳು ಮನುಷ್ಯನಿಗಿಂತ ಬಲಿಷ್ಠವಾದವು. ಆನೆಗೂ ಮನುಷ್ಯನಿಗೂ ಅಜಗಜಾಂತರ. ಜಿಂಕೆ ಕುದುರೆಗಳ ವೇಗವೆಲ್ಲಿಂದ ಬಂದೀತು ಮನುಷ್ಯನಿಗೆ? ಕೃತಜ್ಞತೆ ನಾಯಿಗೆ ಸಹಜ. ಕೃತಜ್ಞತೆಯ ಮೇಲೆ ಪುಂಖಾನುಪುಂಖವಾಗಿ ಭಾಷಣ ಮಾಡುವವನೂ ಕೂಡ ಈ ವಿಷಯದಲ್ಲಿ ನಾಯಿಗೆ ಸಮನಾಗುತ್ತಾನೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ಕತ್ತೆಗಿರುವ ತಾಳ್ಮೆ ಮನುಷ್ಯನಿಗಿಲ್ಲ. ಕನ್ನಡಿಯ ಮುಂದೆ ಆಯುಷ್ಯದ ಬಹುಭಾಗವನ್ನು ಕಳೆಯುವ ವಿಶ್ವಸುಂದರಿಯ ಕೃತಕ ಸೌಂದರ್ಯ ಮತ್ತು ನಡೆ, ನವಿಲಿನ ಸಹಜ ಸೌಂದರ್ಯ, ಘನತೆ ಗಾಂಭೀರ್ಯಗಳೊಂದಿಗೆ ಹೋಲಿಸಲಾಗುವುದಿಲ್ಲ. ಹಸುವಿನ ಜೀವನವೆಲ್ಲಾ ಮನುಷ್ಯನ ಉಪಯೋಗಕ್ಕಾಗಿಯೇ ಆಗಿದೆ. ಹಸು 'ನೀನಾರಿಗಾದೆಯೋ ಎಲೆಮಾನವ?' ಎಂದು ಮೂದಲಿಸಬಹುದು. ಆದರೆ ಅದಕ್ಕೆ ಅಹಂಭಾವದ ಚಿಹ್ನೆ ಕಿಂಚಿತ್ತೂ ಇಲ್ಲ. ಹಸು ನಿಷ್ಕಾಮಕರ್ಮದ ಪ್ರತೀಕ. ಹೀಗೆ ಮನುಷ್ಯ ಎಷ್ಟೋ ವಿಷಯಗಳಲ್ಲಿ ಯಃಕಶ್ಚಿತ್ ಜಂತು. ಆದಾಗ್ಯೂ ತನ್ನ ವಿಚಾರ ಶಕ್ತಿಯಿಂದ ಸರ್ವಶ್ರೇಷ್ಠ ಪ್ರಾಣಿಯಾಗಿದ್ದಾನೆ.

**ಚಿಂತನ**

ಕಪಿಮಾನವನಿಗೆ ಚಿಂತನಾಶಕ್ತಿ ತುಂಬಾ ಕಡಿಮೆ. ಅವನಿಗೂ ಉಳಿದ ಪ್ರಾಣಿಗಳಿಗೂ ಹೆಚ್ಚು ವ್ಯತ್ಯಾಸವಿರಲಿಲ್ಲ. ಪ್ರಕೃತಿಯ ಕ್ರಿಯೆಗಳನ್ನು

ಅರ್ಥಮಾಡಿಕೊಳ್ಳುವ ಶಕ್ತಿ ಅವನಿಗಿರಲಿಲ್ಲ. ಒಂದು ವಿಧದಲ್ಲಿ ಅವನು ಸ್ಥಿತಪ್ರಜ್ಞ. ಹಸಿವಾದಾಗ ಬೇಟೆಯಾಡಿಕೊಂಡು, ಗೆಡ್ಡೆ ಗೆಣಸು ತಿಂದು ಕೊಂಡು ಕಾಡುಮನುಷ್ಯನ ಜೀವನವನ್ನು ನಡೆಸುತ್ತಿದ್ದನು. ಕಾಲಕ್ರಮೇಣ ಸ್ವಲ್ಪ ಕಣ್ಣುಬಿಟ್ಟು ಸುತ್ತಮುತ್ತಣ ಚಟುವಟಿಕೆಗಳನ್ನು ಮನಸ್ಸಿಟ್ಟು ನೋಡಲು ಪ್ರಯತ್ನಪಟ್ಟನು. ಇಷ್ಟಾದರೂ ಪ್ರಕೃತಿಯ ಎಲ್ಲಾ ಕ್ರಿಯೆ ಗಳೂ ಸಹಜವೇ! ಕೈಯಿಂದ ಕಳಚಿ ಬಿದ್ದ ಕಲ್ಲು ಕೆಳಗೆ ಬೀಳಲೇಬೇಕು. ಮೇಲಕ್ಕೆ ಬಿಸಾಡಿದ ಕಲ್ಲಿನ ಅವಸ್ಥೆಯೂ ಅಷ್ಟೆ. 'ಏಕೆ?', 'ಹೇಗೆ?' ಎನ್ನುವ ಪದಗಳು ಇನ್ನೂ ಹುಟ್ಟಿರಲಿಲ್ಲ. ಹುಟ್ಟಿದ ಮೇಲೂ ಇಂತಹ ಸಹಜಕ್ರಿಯೆಗಳಿಗೆ ಅವುಗಳ ಬಳಕೆ ತೀರಾ ಹಾಸ್ಯಾಸ್ಪದವಾಗಿದ್ದಿತು. ಈಗಲೂ ಸಂಪ್ರದಾಯವಾದಿಗಳಿಗೆ ಪ್ರಶ್ನೆ ಪ್ರತಿಪ್ರಶ್ನೆಗಳು ಅಷ್ಟಾಗಿ ಹಿಡಿಸು ವುದಿಲ್ಲ.

ಮೂಲಮಾನವ ಮಂದಮತಿಯಾದಾಗ್ಯೂ ಅಲ್ಪ ಸ್ವಲ್ಪ ವಿವೇಚನಾ ಶಕ್ತಿಯನ್ನು ಹೊಂದಿದ್ದನು. ಇವನ ಮನಸ್ಸಿನ ಮೇಲೆ ಪ್ರಕೃತಿಯ ಕೆಲವು ಘಟನೆಗಳು ಗಾಢವಾದ ಪರಿಣಾಮವನ್ನುಂಟು ಮಾಡಿದವು. ಆ ಪ್ರಾಚೀನ ಮನುಷ್ಯನ ಮೇಲೆ ಆದ ಪ್ರಭಾವದ ಅವಶೇಷ ಇಂದಿಗೂ ಈ ಆಲೋಚನಾ ಜೀವಿಯ ಮನಸ್ಸಿನ ಹಿನ್ನೆಲೆಯಲ್ಲಿ ತಕ್ಕಮಟ್ಟಿಗೆ ಪಟ್ಟುಹಿಡಿದು ನಿಂತೇ ಇದೆ.

**ಲಾಂಛನ**

ಗುಡುಗು ಸಿಡಿಲಿನಿಂದ ಅನಾಗರಿಕ ಮಾನವ ದಿಗ್ಭ್ರಾಂತನಾಗಿರಬೇಕು. ಜಂಘಾಬಲವೇ ಉಡುಗಿ ಹೋಗಿರಬೇಕು. ಇವು ದೇವತೆಗಳ ಕೋಪದ ಲಾಂಛನಗಳಾಗಿದ್ದವು. ಈಗಲೂ ಗುಡ್ಡಗಾಡಿನ ಜನರಲ್ಲಿಯೇ ಏಕೆ, ಉಳಿದ ಹಲವು ಜನಗಳಲ್ಲಿಯೂ ಅದೇ ನಂಬಿಕೆಗಳೇ ಇವೆ.

ಮೊದಲನೆಯ ಗ್ರಹಣದ ಅನುಭವವಂತೂ ಇವನ ಮೇಲೆ ಭಯಂಕರ ಪರಿಣಾಮವನ್ನುಂಟುಮಾಡಿರಬೇಕು. ಮಟಮಟ ಮಧ್ಯಾಹ್ನದಲ್ಲಿ ಗಾಢಾಂಧ ಕಾರ; ಹಾಲು ಚೆಲ್ಲಿದ ಬೆಳುದಿಂಗಳಲ್ಲಿ ಅಮಾವಾಸ್ಯೆಯ ಅನುಭವ. ಗಂಡಾಂತರ ತಾತ್ಕಾಲಿಕವಾದದ್ದೆಂದು ತಿಳಿದಮೇಲೆ ನೆಮ್ಮದಿಯ ನಿಟ್ಟುಸಿರು.

ಸೂರ್ಯಚಂದ್ರರನ್ನು ಯಾವುದೋ ಪ್ರಾಣಿಗಳು ನುಂಗಿ ಜೀರ್ಣಿಸಿಕೊಳ್ಳ ಲಾರದೇ ಹೋಗಿರಬೇಕೆಂಬ ಊಹೆ. ಆ ಪ್ರಾಣಿಗಳನ್ನು ಓಡಿಸಲು ಅಥವಾ ಭಯಪಡಿಸಲು ಸಾಮೂಹಿಕ ಕೂಗಾಟ, ವಾದ್ಯಗಳ ಘೋಷಣೆಗಳನ್ನು ಉಪಯೋಗಿಸಿಕೊಂಡಿದ್ದರೂ ಹೆಚ್ಚಲ್ಲ. ದೇವಸಮಾನರಾದ, ಬೆಳಕು ಕೊಡುವ, ಜೀವ ಪೋಷಿಸುವ ಸೂರ್ಯಚಂದ್ರರಿಗೇ ಇಂತಹ ಆಪತ್ತು ಒದಗಿದ ಮೇಲೆ ನಮ್ಮಂತಹ ಅಲ್ಪಜೀವಿಗಳು ಕಷ್ಟಗಳನ್ನು ಅನುಭವಿಸುವುದು ಸಹಜ ವೆಂಬ ಸಮಾಧಾನ. ಗ್ರಹಣ ಕಾಲ ಕಳವಳದ ಅವಧಿ. ಊಟವಿಲ್ಲ, ಅಡುಗೆಯ ಪ್ರಯತ್ನವೂ ಇಲ್ಲ. ಸೂರ್ಯಚಂದ್ರರ ಬಂಧ ವಿಮೋಚನೆಯಾದ ಮೇಲೆಯೇ ನಿತ್ಯ ಚಟುವಟಿಕೆಗಳ ಆರಂಭ.

ಕಾಡುಜನರಿಗೆ ಮರದ ಕೊಂಬೆಗಳು ಮುರಿಯುವಾಗ ಆಗುವ ಶಬ್ದ ಅದರೊಳಗಿನ ಚೇತನದ–ಅದೃಶ್ಯ ಶಕ್ತಿಯ ಚೀತ್ಕಾರವಾಗಿದ್ದಿತು. ಅಂತೆಯೇ ಬಿದಿರು ಮೆಳೆಗಳ ತಿಕ್ಕಾಟ ಕಾಡುದೇವತೆಯ ಗೋಳಾಟವಾಗಿದ್ದಿತು.

**ದಿಗ್ಭ್ರಾಂತಿ**

ಕನಸಿನಿಂದ ಎದ್ದ ಪ್ರಾಚೀನ ಮಾನವನಿಗೆ ದಿಗ್ಭ್ರಾಂತಿಯಾಗಿರಬೇಕು. ಸ್ವಲ್ಪ ಹೊತ್ತಿನ ಹಿಂದೆ ಮತ್ತಾವುದೋ ವಿಭಿನ್ನ ವ್ಯಕ್ತಿತ್ವದ ಅನುಭವವಾಗಿರ ಬೇಕೆಂದು ತಿಳಿದುಕೊಂಡಿದ್ದರೂ ಹೆಚ್ಚಲ್ಲ. ಅನುಮಾನದಿಂದ ತನ್ನ ಮೇಲ್ಮೈಯ ಲಕ್ಷಣಗಳನ್ನು ಪರೀಕ್ಷಿಸಿಕೊಂಡು ನಾನೇ-ನಾನು ಎಂದು ಸ್ಥಿರ ಪಡಿಸಿಕೊಂಡು ಸಮಾಧಾನ ಹೊಂದಿರಬಹುದು. ಆದರೂ ಕನಸಿನ ಅನುಭವ ತೀರಾ ವಿಚಿತ್ರ. ಕನಸು ನನಸಾಗುವುದೆಂಬ, ಮುಂದೆ ಆಗುವ ಘಟನೆಗಳ ಪೂರ್ವ ಪ್ರದರ್ಶನವಿರಬಹುದೆಂಬ ನಂಬಿಕೆ ಈಗಲೂ ಇದೆ. ಯಾವುದೋ ಶಕ್ತಿ ತಾನು ಮಲಗಿದ್ದಾಗ ತನ್ನ ದೇಹದಲ್ಲಿ ಹೊಕ್ಕು ಭವಿಷ್ಯ ಹೇಳಿ ಮಾಯ ವಾಗಿರಬೇಕೆಂಬ ಪ್ರಬಲ ಶಂಕೆ. ಕನಸುಗಳೂ ಕೂಡ ಮನುಷ್ಯನ ನಂಬಿಕೆ ಗಳನ್ನು ರೂಪಿಸುವುದರಲ್ಲಿ ಯಥಾಶಕ್ತಿ ಪ್ರಭಾವವನ್ನು ಉಂಟುಮಾಡಿವೆ.

**ಚೇತನ**

ಸಾವು ಮನುಷ್ಯನ ತೀವ್ರ ಗಮನವನ್ನು ಯಾವಾಗಲೂ ಸೆಳೆದಿದೆ. ಪ್ರಾಣಿಗಳ ಸಾವಿನ ಪರಿಚಯವಿದ್ದರೂ ಮನುಷ್ಯನ ತನ್ನ ಸಂಬಂಧಿಯ

ಸಾವು ಮಹತ್ವದ ಪರಿಣಾಮವನ್ನುಂಟುಮಾಡಿದೆ. ಕ್ಷಣದ ಹಿಂದೆ ಓಡಾಡುತ್ತಿದ್ದ ವ್ಯಕ್ತಿ ಕ್ಷಣಾರ್ಧದಲ್ಲಿ ಕಟ್ಟಿಗೆಯ ತುಂಡಿನೋಪಾದಿಯಲ್ಲಿ ಆಗುವ ದೃಶ್ಯ ಹೃದಯ ವಿದ್ರಾವಕ. ಎಲ್ಲಾ ಜನಾಂಗಗಳಲ್ಲಿಯೂ ಸಾಮಾನ್ಯವಾಗಿ ದೇಹಕ್ಕಿಂತ ಮಿಗಿಲಾದ ಒಂದು ಚೇತನವಿದೆ ಎಂಬ ನಂಬಿಕೆ ಇದ್ದೇ ಇದೆ. ಇದಕ್ಕೆ ಮಾನವ ಮಾಡುವ ಅಪರಕರ್ಮಗಳೇ ಸಾಕ್ಷಿ. ಸತ್ತ ದೇಹಕ್ಕೆ ಲೇಪನ, ಅದನ್ನು ಹೂಳುವುದು, ಹೂಳುವ ವಿಧಾನ, ಗುಂಡಿಯಲ್ಲಿ ದೇಹದ ಜೊತೆ ಇಡುವ ಸಾಮಗ್ರಿಗಳು, ಇವುಗಳೆಲ್ಲಾ ಸಾವೇ ಜೀವನದ ಕೊನೆಯಲ್ಲ ಎಂಬುದನ್ನು ವ್ಯಕ್ತಪಡಿಸುತ್ತವೆ. ಸತ್ತ ದೇಹವನ್ನು ಸುಟ್ಟರೂ ಈ ನಂಬಿಕೆಗಳಲ್ಲಿ ವ್ಯತ್ಯಾಸವಿಲ್ಲ.

ಭೂತಪ್ರೇತ ಪಿಶಾಚಿಗಳು ಮನುಷ್ಯನಿಂದ ಸೃಷ್ಟಿಸಲ್ಪಟ್ಟವು. ಇವು ದಿಗ್ಭ್ರಾಂತ, ಭಯಗ್ರಸ್ತ ಮೆದುಳಿನ ಕಲ್ಪನೆ. ಮಾಯಮಾಟಗಳು ತತ್ಸಂಬಂಧವಾದವು. ಭೂತಪ್ರೇತಗಳೆಲ್ಲಾ ಪ್ರಾಚೀನ ಮಾನವನಿಗೆ ನಿಸರ್ಗದ ಅದೃಶ್ಯ ಶಕ್ತಿಗಳು. ಮಾಟ, ಮೋಡಿಯ ಸಹಾಯದಿಂದ, ಈ ದುಷ್ಟಶಕ್ತಿಗಳ ಪ್ರಭಾವದಿಂದ ಪಾರಾಗಲು ಮಾನವನು ಯತ್ನಿಸಿದನು.

ಪ್ರಕೃತಿಯ ಘಟನೆಗಳು ಮತ್ತು ಪುರಾತನ ಕಾಲದ ಮಾನವನ ಕಲ್ಪನೆಗಳು ಮುಖ್ಯವಾಗಿ ಭಯವನ್ನುಂಟುಮಾಡಿದವು. ಹಿಂದಿನ ಕಾಲದಲ್ಲಿ ಯಾವ ಭೀತಿ ಮನುಷ್ಯನ ಮೆದುಳನ್ನು ಹೊಕ್ಕಿತೋ ಅದು ನಮ್ಮನ್ನು ಇಂದೂ ಬಾಧಿಸುತ್ತಲೇ ಇದ್ದು ಬಹು ಮೂಢ ನಂಬಿಕೆಗಳಿಗೆ, ಅತಾರ್ಕಿಕವಾದಕ್ಕೆ, ವಿರೋಧಾಭಾಸದ ಮನೋಭಾವಕ್ಕೆ ಬುನಾದಿಯಾಗಿದೆ.

### ಕೈವಾಡ

ಕಾಲಕ್ರಮೇಣ ಮನುಷ್ಯನ ಯೋಚನಾಶಕ್ತಿ ಹೆಚ್ಚಿತು. ಯಾವ ಘಟನೆಗಳನ್ನು ಮನುಷ್ಯನು ತರ್ಕ ಬದ್ಧವಾಗಿ ವಿಶ್ಲೇಷಣೆ ಮಾಡಲು ಆಗಲಿಲ್ಲವೋ ಅವು ಪ್ರಕೃತ್ಯತೀತ (Supernatural) ಆದವು. ಅಂದ ಮೇಲೆ ಅಂತಹ ಒಂದೊಂದು ಘಟನೆಯ ಹಿಂದೆ ಒಂದೊಂದು ದೇವತೆಯ ಕೈವಾಡವಿರಬೇಕೆಂಬ ನಂಬಿಕೆ ಬಲವಾಯಿತು. ಇಂದ್ರನ ರಥ ಚಲಿಸಿದಾಗ ಗುಡುಗು. ವೇಗ ಹೆಚ್ಚಿದಾಗ ಗುಡುಗಿನ ಆರ್ಭಟವೂ ಅಧಿಕ. ಕುದುರೆಗಳನ್ನು ಓಡಿಸಲು

ಚಾವಟಿಯನ್ನು ಉಪಯೋಗಿಸಿದಾಗ ಮಿಂಚು. ಇಂದ್ರನಿಗೆ ತಡೆಯಲಾರದ ಕೋಪ ಬಂದಾಗ ಎಸೆದ ಅಸ್ತ್ರವೇ ಸಿಡಿಲು. ಪ್ರಪಂಚದ ಎಲ್ಲಾ ಭಾಗದ ಜನರಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಇದೇ ವಿಧವಾದ ನಂಬಿಕೆಗಳು ಮೊದಲಾದವು. ನಮ್ಮ ದೇಶದಲ್ಲಿ ಗುಡುಗು, ಮಿಂಚು, ಸಿಡಿಲು ಇಂದ್ರನ ಕೈವಾಡವಾಗಿದ್ದರೆ ಗ್ರೀಕರಲ್ಲಿ ಜೀವಪಿತೃ (Jupiter) ಈ ಲೀಲೆಗಳಿಗೆ ಅಧಿದೇವತೆ. ಹಗಲು ರಾತ್ರಿಗಳಿಗೆ ಕಾರಣ ಪುರುಷನಾದ ಮತ್ತು ಜೀವಪೋಷಕನಾದ ಸೂರ್ಯ, ಭಗವಾನ್ ಆದ. ಈಗಲೂ ಸೂರ್ಯ, ದೇವರೆಂಬ ನಂಬಿಕೆ ನಮ್ಮ ದೇಶದಲ್ಲಿ ಸಾಕಷ್ಟು ಇದೆ.

## ಪೂಜ್ಯತೆ

ಪೂಜೆ, ಪ್ರಾರ್ಥನಾದಿಗಳು ಸೂರ್ಯನಿಗೆ ತಪ್ಪದೆ ಸಲ್ಲುತ್ತಿವೆ. ಬೆಳಗ್ಗೆ ಸೂರ್ಯನ ಅಭಿಮುಖವಾಗಿ ನಿಂತು ಶ್ರದ್ಧಾ ಭಕ್ತಿಗಳಿಂದ ಧ್ಯಾನಮಾಡುವುದು, ನಮಸ್ಕಾರ ಮಾಡುವುದು ಈಗಲೂ ವಾಡಿಕೆಯಾಗಿದೆ. ಬೆಂಕಿ ಭೂಮಿಯ ಮೇಲಿನ ಸೂರ್ಯನ ಕಿಡಿ. ಆದುದರಿಂದ ಅಗ್ನಿಗೂ ಎಲ್ಲ ಕಡೆಯಲ್ಲಿಯೂ ಅದೇ ಪೂಜ್ಯತಾ ಭಾವನೆಯೇ ಸಂದಿದೆ–ಸಲ್ಲುತ್ತಾ ಇದೆ. ಎಲ್ಲಾ ಶುಭಕಾರ್ಯಗಳು ಎಷ್ಟೋ ಧರ್ಮಗಳಲ್ಲಿ ಅಗ್ನಿ ಸಾಕ್ಷಿಯಾಗಿ ನಡೆಯಬೇಕು. ಹೋಮ ಹವನಾದಿಗಳಿಗೆ ಅಗ್ನಿಯೇ ಅಧಿದೇವತೆ. ಪ್ರಮಾಣ ಅಗ್ನಿಯ ಮುಂದೆ ಮಾಡಿದರೆ ಅದಕ್ಕೆ ಬೆಲೆ ಹೆಚ್ಚು ಮತ್ತು ಪ್ರಮಾಣ ಮಾಡುವವನು ಅತ್ಯಂತ ಬಲವಾದ ಧರ್ಮಸಂಕಟದ ಬಂಧನದಲ್ಲಿ ಸಿಕ್ಕಿಕೊಳ್ಳುತ್ತಾನೆ. ಮನೆಯಲ್ಲಿ ಮೋಂಬತ್ತಿಯಾಗಲಿ, ಎಣ್ಣೆ ದೀಪವಾಗಲಿ ಹಚ್ಚಿದಾಗ ಭಕ್ತಿ ಪೂರ್ವಕವಾಗಿ ಕೈಜೋಡಿಸುವುದು ಈಗಲೂ ಆಚರಣೆಯಲ್ಲಿದೆ. ವಿದ್ಯುಚ್ಛಕ್ತಿಯ ದೀಪಕ್ಕೂ ಅದೇ ಮಾನ್ಯತೆ. ಕತ್ತಲು ಭಯಾನಕ. ಬೆಳಕು ಕತ್ತಲನ್ನು ಓಡಿಸುತ್ತದೆ. ಯಾವನೂ ಕತ್ತಲನ್ನು ಇಚ್ಛಿಸುವುದಿಲ್ಲ. ಅಜ್ಞಾನವನ್ನು ಕತ್ತಲಿಗೆ ಹೋಲಿಸಿ, ಜ್ಯೋತಿ ಜ್ಞಾನದ ಸಂಕೇತವಾಗಿ ಔನ್ನತ್ಯದ ಸ್ಥಾನವನ್ನು ಪಡೆದಿದೆ. ಸಮೃದ್ಧಿಯಾದ ಬೆಳೆಗಳನ್ನು ಕೊಟ್ಟು ಜೀವನಕ್ಕೆ ಆಧಾರವಾದ ಭೂಮಿ, ದೇವತೆಯ ಸ್ಥಾನವನ್ನು ಪಡೆದಿದೆ. ಭೂಮಿ ತಾಯಿಗೆ ಪೂಜೆ ಪುರಸ್ಕಾರಗಳು ಈಗಲೂ ಸಲ್ಲುತ್ತಿವೆ.

ಮಳೆಗೆ ಅಧಿದೇವತೆ ವರುಣ. ಅಗ್ನಿಯನ್ನು ಶಮನ ಮಾಡುವ ಶಕ್ತಿ ಪಡೆದಿರುವ ವರುಣನಿಗೆ ದೇವಗಣದಲ್ಲಿ ಗಣ್ಯಸ್ಥಾನ.

ಧೂಮಕೇತುವಿನ ಆಗಮನ ಅನಿಷ್ಟ ಸೂಚಕವಾಗಿದ್ದಿತು. ಅದು ಪ್ರಸಿದ್ಧ ಪುರುಷರ ಸಾವಿನ ಮುನ್ಸೂಚನೆ ಎಂಬ ಪ್ರಬಲ ನಂಬಿಕೆ ಇದ್ದಿತು.

ದೇಹಕ್ಕೂ, ಖಾಯಿಲೆಗಳಿಗೂ ನಿಕಟ ಸಂಬಂಧ. ಖಾಯಿಲೆಯನ್ನನುಭವಿಸದ ಪ್ರಾಣಿಯಿಲ್ಲ. ಚಿಕ್ಕಪುಟ್ಟ ಖಾಯಿಲೆಗಳಿಗೆ ಯಾವ ಹೆಚ್ಚಿನ ಅರ್ಥವನ್ನೂ ಕೊಡಲಿಲ್ಲ. ಕ್ಲಿಷ್ಟವಾದ ರೋಗಗಳ ಹಿಂದೆ ಚಿಲ್ಲರೆ ದೇವತೆಗಳ ಕೈಚಳಕವಿದೆ ಎಂಬ ಭಾವನೆ ಇದ್ದಿತು. ಇಂತಹ ರೋಗಗಳ ಸಂಖ್ಯೆ ಹೆಚ್ಚಾದಷ್ಟೂ ತದನುಗುಣವಾಗಿ ದೇವತೆಗಳ ಸಂಖ್ಯೆಯೂ ಹೆಚ್ಚಿತು. ಕಾಲರಾಗೆ ಒಂದು ದೇವತೆ ಅಥವಾ 'ಅಮ್ಮ'. ಸಿಡುಬಿಗೆ ಇನ್ನೊಂದು 'ಅಮ್ಮ'. ಪ್ಲೇಗಿಗೆ 'ಪಿಳೇಕಮ್ಮ'. ಇವೆಲ್ಲಾ ನವೀನ ದೇವತೆಗಳು. ದೇಹ ಸಂಬಂಧವಾದ ರೋಗಗಳು ಅಪ್ರತ್ಯಕ್ಷವಾಗಿ ದೇವತೆಗಳ ಪ್ರಸಾದವಾದರೆ ಮನೋರೋಗಗಳು ದೇವತೆಗಳ ಸಾಕ್ಷಾತ್ಕಾರ ಸ್ವರೂಪ. ಇಂತಹ ರೋಗಿಗಳು ತಮ್ಮ ಆವೇಶದಲ್ಲಿ ಮಾಡುವ ಕೆಲವು ಅಸಾಮಾನ್ಯ ಕೆಲಸಗಳು ಈ ನಂಬಿಕೆಗೆ ಮತ್ತಷ್ಟು ಪುಷ್ಟಿ ಕೊಟ್ಟಿವೆ.

## ನಂಬಿಕೆ

ದೇವತೆಗಳಿಗೆ ಕೋಪ ಬಂದಾಗ ಮನುಷ್ಯನಿಗೆ ಅನಿಷ್ಟ ಒದಗುವುದೆಂಬ ನಂಬಿಕೆ ಇದೆ. ಕೋಪ ಬಂದ ಜನಗಳನ್ನು ಸಮಾಧಾನಪಡಿಸಲು ಉಪಯೋಗಿಸುವ ಮಾರ್ಗಗಳನ್ನೇ ಕುಪಿತ ದೇವತೆಗಳನ್ನು ಸಂತುಷ್ಟರನ್ನಾಗಿ ಮಾಡಲು ಉಪಯೋಗಿಸುವುದು ಸಹಜ. ದೇವರು ಅತಿಮಾನುಷ. ಮನುಷ್ಯನಿಗೆ ಯಾವುದು ಪ್ರಿಯವೋ ಅದೇ ದೇವರಿಗೂ ಇಷ್ಟ. ಕೋಳಿಯಾಗಬಹುದು ಅಥವಾ ಕೋಡುಬಳೆಯಾಗಬಹುದು. ಇನ್ನೂ ಕೆಲವು ಪ್ರಾಣಿಗಳೂ ಪೂಜಾ ಸಾಮುಗ್ರಿಗಳೇ! ನರಬಲಿ ಅತ್ಯಂತ ಶ್ರೇಷ್ಠಮಟ್ಟದ ಕಾಣಿಕೆ. ಈಗಲೂ ನರಬಲಿ ಕೊಡುವುದನ್ನು ಅಲ್ಲಲ್ಲಿ ಆಗಾಗ ನೋಡುತ್ತೇವೆ.

ಪ್ರಾಚೀನ ಮಾನವನಿಗೆ ಈ ಮೇಲ್ಕಂಡ ನಂಬಿಕೆಗಳೆಲ್ಲಾ ಮೂಲ ಆಸ್ತಿ. ಕಾಲಕ್ರಮೇಣ ಈ ಆಸ್ತಿಯು ವಿಸ್ತಾರವಾಗಿದೆ. ಅಲ್ಪಸ್ವಲ್ಪ ಮಾರ್ಪಾಡು ಆಗಿದೆ. ಏತನ್ಮಧ್ಯೆ ಹಲವು ನಶಿಸಿಹೋಗಿವೆ. ಹಲವು ನಂಬಿಕೆಗಳು ವಸ್ತುಶಃ ಬದಲಾವಣೆ ಹೊಂದಿಲ್ಲದಿದ್ದರೂ ಸ್ವರೂಪ ಮಾತ್ರ ಬದಲಾಯಿಸಿದೆ.

ಹಿಂದಿನ ಕಾಲದಲ್ಲಿ ವಾಹನ ಸೌಕರ್ಯಗಳಿರಲಿಲ್ಲ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಜನಗಳು ವಲಸೆ ಹೋಗುತ್ತಿದ್ದರು. ಅಲೆದಾಡುವ ಜೀವನ. ಭೂಮಿ ಯಾರ ಅಜ್ಜನ ಆಸ್ತಿಯೂ ಆಗಿರಲಿಲ್ಲ. ಎಲ್ಲಾ ಸಂಘ ಜೀವನ. ಒಟ್ಟಿಗೆ ಒಂದು ಕಡೆ ನೆಲೆಸುವುದು–ವಾಸವಾಡುವುದು. ಅಲ್ಲಿಂದ ಮುಂದೆ ಹೋಗುವುದು. ಜನಸಂಖ್ಯೆ ತುಂಬಾ ಕಡಿಮೆ. ಅಪಾರವಾದ ಭೂಸಂಪತ್ತು. ಯಾರಿಗೆ ಎಷ್ಟು ಬೇಕಾದರೂ ಅಷ್ಟು ಭೂಮಿಯ ಸೌಲಭ್ಯ ವಿದ್ದಿತು. ಆಕಾಶ ನೋಡಲು ನೂಕುನುಗ್ಗಲೇಕೆ? ಭೂಮಿಯ ಸ್ವಾಮ್ಯಕ್ಕಾಗಿ ಯಾವ ವಿಧವಾದ ಘರ್ಷಣೆಗಳೂ ಇಲ್ಲದೇ ಜೀವನ ಸಾಗಿದ್ದಿತು. ಕೆಲವು ದಶಕಗಳ ಹಿಂದೆಯೂ ಭೂಮಿಯ ಒಡೆತನಕ್ಕೆ ಈಗಿರುವಷ್ಟು ಪೈಪೋಟಿ ಇರಲಿಲ್ಲ.

ಆಗಿನ ಕಾಲದ ಜನಗಳ ಪ್ರಪಂಚ ಚಿಕ್ಕದಾಗಿದ್ದಿತು. ಅವನು ನಡೆಯುವಷ್ಟು—ಅವನಿಗೆ ಕಾಣಿಸುವಷ್ಟು—ಅಷ್ಟೇ ಪ್ರಪಂಚ. ಕುದುರೆ, ಗಾಡಿಗಳ ಸಹಾಯದಿಂದ ಅವನ ಪ್ರಪಂಚ ಸ್ವಲ್ಪ ವಿಸ್ತಾರವಾಯಿತು. ಒಂದು ಚಿಕ್ಕ ಪ್ರದೇಶದಲ್ಲಿ ವಾಸಮಾಡುವ ಜನಗಳಿಗೆ ತಮ್ಮದೇ ಆದ ನಂಬಿಕೆಗಳು, ಸಂಪ್ರದಾಯಗಳು ಬೆಳೆದವು. ಇವೆಲ್ಲಾ ಸ್ಥಳೀಯ ನಿಯಮಗಳಾದವು. ಇವುಗಳು ಪ್ರಪಂಚದ ನಿಯಮಗಳೆಂದು ಆ ಜನಗಳಿಗೆ ಗೋಚರವಾಯಿತು. ಅದು ಅವರ ತಪ್ಪಲ್ಲ. ಕೂಪದಲ್ಲಿರುವ ಮಂಡೂಕಕ್ಕೆ ಆ ಬಾವಿಯೇ ಪ್ರಪಂಚ. ಹಾಗೆಯೇ ಒಂದೊಂದು ಗುಂಪೂ ತಮ್ಮ ಬುದ್ಧಿಗೆ ಎಟಕುವಷ್ಟರ ಮಟ್ಟಿನ ಸಂಪ್ರದಾಯಗಳನ್ನು ಸೃಷ್ಟಿಸಿಕೊಂಡರು. ಭೂಮಿಯ ಮೇಲೆ ವಿವಿಧ ಭಾಗಗಳಲ್ಲಿ ಜೀವ ಸ್ವಲ್ಪ ಹೆಚ್ಚು ಕಡಿಮೆ ಒಟ್ಟಿಗೆ ಹುಟ್ಟಿರಬೇಕು. ಬೆಳವಣಿಗೆಯು ಸ್ಥೂಲವಾಗಿ ಒಂದೇ ಪ್ರಮಾಣದಲ್ಲಿ ಆಗಿರಬೇಕು. ಪ್ರಕೃತಿಯ ಘಟನೆ

ಗಳಾದ ಗುಡುಗು, ಸಿಡಿಲು, ಮಿಂಚು, ಅಗ್ನಿ, ಬೆಳಕು, ಕತ್ತಲೆ ಮತ್ತು ಪ್ರಾಣಿ ಸಹಜವಾದ ರೋಗ, ಸ್ವಪ್ನ ಮತ್ತು ಸಾವು ಭೂಮಿಯ ಎಲ್ಲಾ ಭಾಗಗಳ ಜನಗಳ ಮೇಲೂ ಒಂದೇ ವಿಧವಾದ ಪ್ರತಿಕ್ರಿಯೆಯನ್ನುಂಟುಮಾಡಿರ ಬೇಕು.

## ಬೀಜವೃಕ್ಷ ನ್ಯಾಯ

ಕಾಲಕ್ರಮೇಣ ಸಂಜ್ಞೆ, ಅನುಕರಣೆ, ಮಾತಿನಿಂದ ಭಾಷೆ ಬೆಳೆಯಿತು. ಸಂಕೇತಗಳಿಂದ ಲಿಪಿ ಬೆಳೆಯಿತು. ವಾಹನ ಸೌಕರ್ಯದ ಅಭಾವದಿಂದ ಸಂಪ್ರದಾಯಗಳು ಹೇಗೆ ಸ್ಥಳೀಯ ನಿಯಮಗಳಾದುವೋ ಹಾಗೆಯೇ ಪ್ರಪಂಚದ ವಿವಿಧ ಭಾಗಗಳಲ್ಲಿ ಬಹುಭಾಷೆಗಳು ಹುಟ್ಟಿ ಅಲ್ಲಿಯೇ ನೆಲೆಸಿದವು.

ಅಸ್ಪಷ್ಟವಾಗಿ ಮೊದಲಾದ ದೇವರು, ಧರ್ಮಗಳ ಕಲ್ಪನೆ ಕಾಲಕ್ರಮೇಣ ವ್ಯವಸ್ಥಿತ ರೂಪವನ್ನು ತಾಳಿತು. ದೇವರು ಮನುಷ್ಯನನ್ನು ಸೃಷ್ಟಿಸಿದನೋ ಅಥವಾ ಮನುಷ್ಯನೇ ದೇವರನ್ನು ಸೃಷ್ಟಿಸಿಕೊಂಡನೋ ಎಂಬ ಜಿಜ್ಞಾಸೆ ಬೀಜವೃಕ್ಷ ನ್ಯಾಯದ ಸಮಸ್ಯೆಯನ್ನು ಹೋಲುತ್ತದೆ.

ಸುಮಾರು 2500 ವರ್ಷಗಳ ಹಿಂದೆ ಬುದ್ಧನಿರಲಿಲ್ಲ. ಬೌದ್ಧಧರ್ಮವೂ ಇರಲಿಲ್ಲ. ಹಾಗೆಯೇ ಏಸುಕ್ರಿಸ್ತನಿಗೆ ಮುಂಚೆ ಕ್ರೈಸ್ತ ಧರ್ಮವಿರಲಿಲ್ಲ. ಇಸ್ಲಾಂ ಧರ್ಮ ಇನ್ನೂ ಈಚಿನದು. ಹಿಂದೂಧರ್ಮ ಸನಾತನ ಧರ್ಮ ವೆಂದೂ, ಅನಾದಿ ಎಂದು ಹೆಸರು ಪಡೆದಿದ್ದರೂ ಅದಕ್ಕೂ ಒಂದು ಮೂಲವಿರ ಬೇಕು. ಈ ಎಲ್ಲಾ ಧರ್ಮಗಳೂ ಮನುಷ್ಯರಿಂದ ಸ್ಥಾಪಿಸಲ್ಪಟ್ಟವು. ಆದರೆ ಆ ಧರ್ಮಗಳ ಸ್ಥಾಪಕರು ತುಂಬಾ ಶ್ರೇಷ್ಠಮಟ್ಟದ ಮನುಷ್ಯರು. ನಿಸ್ವಾರ್ಥಿ ಗಳು. ಜಗತ್ತಿನ ಹಿತಕ್ಕಾಗಿ, ಮಾನವ ಕಲ್ಯಾಣಕ್ಕಾಗಿ ನೀತಿ ನಿಯಮ ಗಳನ್ನು ಪ್ರತಿಪಾದಿಸಿ ಶ್ರಮಿಸಿದ ಮಹಾವ್ಯಕ್ತಿಗಳು. ಮೂಲತಃ ಎಲ್ಲ ಧರ್ಮಗಳ ನಂಬಿಕೆಯಂತೆ ದೇವರು ಒಬ್ಬನೇ ಆದರೂ ಅವನ ಸಾಕ್ಷಾತ್ಕಾರ ವನ್ನು ಪಡೆಯುವ ವಿಧಾನದಲ್ಲಿ ವ್ಯತ್ಯಾಸಗಳಿದ್ದವು. ಧರ್ಮ ಹುಟ್ಟಿನ ಮೇಲೆ ಅವಲಂಬಿಸಿದೆ. ಸಾಮಾನ್ಯವಾಗಿ ಬದಲಾವಣೆಗೆ ಅವಕಾಶವಿಲ್ಲ. ಆದರೆ ಹಿಂದೆ ಮತಾಂತರಗಳು ದೊಡ್ಡ ಪ್ರಮಾಣದಲ್ಲಿ ಆಗುತ್ತಿದ್ದವು. ಒಬ್ಬ ರಾಜ ತನ್ನ ಧರ್ಮವನ್ನು ಸ್ವಇಚ್ಛೆಯಿಂದ ಬದಲಾಯಿಸಿದಾಗ ಪ್ರಜೆಗಳೂ

ಕೂಡ ರಾಜನ ಧರ್ಮವನ್ನವಲಂಬಿಸುವುದು ಪದ್ಧತಿಯಾಗಿತ್ತು. ಆ ಕಾಲದಲ್ಲಿ "ರಾಜಾ ಪ್ರತ್ಯಕ್ಷ ದೇವತಾ" ಆಗಿದ್ದನು. ಹಾಗೆಯೇ ಯುದ್ಧದಲ್ಲಿ ಸೋತ ರಾಜನು ತನ್ನ ಪ್ರಜೆಗಳೊಂದಿಗೆ ಗೆದ್ದ ರಾಜನ ಧರ್ಮವನ್ನು ಅವಲಂಬಿಸು ವುದೂ ವಾಡಿಕೆಯಲ್ಲಿದ್ದಿತು. ಆನೇಲೆ ಬಹು ಮತಾಂತರಗಳು ಆರ್ಥಿಕ, ಸಾಮಾಜಿಕ ಉದ್ದೇಶಗಳಿಗಾಗಿ ಆದವು. ಆತ್ಮಸಾಕ್ಷಿಯಾಗಿ, ಮನಸ್ಪೂರ್ತಿ, ನಿಶ್ಚಿತಾಭಿಪ್ರಾಯದಿಂದ ಆಗುವ ಮತಾಂತರಗಳು ತುಂಬಾ ಕಡಿಮೆ. ಒಟ್ಟಿನಲ್ಲಿ ಹಲವು ಧರ್ಮಗಳು ಮಾನವ ಜಾತಿಯನ್ನು ಅತಾರ್ಕಿಕ ತಳಹದಿಯ ಮೇಲೆ ಶಾಶ್ವತವಾಗಿ ಒಡೆದವು.

## ಧರ್ಮಾಂಧತೆ

ಎಲ್ಲಾ ಧರ್ಮಗಳೂ ಒಂದೇ, ಇವೆಲ್ಲಾ ಮೋಕ್ಷಸಾಧನೆಗೆ ವಿವಿಧ ಮಾರ್ಗಗಳು ಎಂಬ ವಾದ ಚಿರಪರಿಚಿತವಾದುದು. ಆದರೆ ತಮ್ಮ ಧರ್ಮವೇ ಅತ್ಯಂತ ಶ್ರೇಷ್ಠ ಎಂಬ ಬಲವಾದ ನಂಬಿಕೆ ವಿವಿಧ ಧರ್ಮಸ್ಥರಲ್ಲಿ ಬೇರೂರಿದೆ. ಎಲ್ಲಾ ಧರ್ಮಗಳೂ ಮನುಷ್ಯಕೃತವಾದ ಮೇಲೆ ಆ ಧರ್ಮಗಳಿಗೆಲ್ಲಾ ಇತಿ ಮಿತಿಗಳು ಇದ್ದೇ ಇರಬೇಕು. ಧರ್ಮಸಂಸ್ಥಾಪಕರ ಅನುಭವ ಬಹುತೇಕ ಆಗಿನ ಕಾಲದ ಸನ್ನಿವೇಶಗಳಿಗನುಗುಣವಾಗಿದ್ದಿತು. ಯಾವ ಧರ್ಮ ಗ್ರಂಥವೂ ಎಲ್ಲಾ ಕಾಲಕ್ಕೂ ಅನ್ವಯಿಸುವುದಿಲ್ಲ. ಅನ್ವಯಿಸಲು ಸಾಧ್ಯವೂ ಇಲ್ಲ. ಆದುದರಿಂದ ಯಾವ ಗ್ರಂಥವನ್ನೇ ಆಗಲಿ ಪ್ರಮಾಣ ಗ್ರಂಥವನ್ನಾಗಿ ಒಪ್ಪಿಕೊಳ್ಳುವುದು ಬುದ್ಧಿಜೀವಿಯ ಲಕ್ಷಣವಲ್ಲ. ಆಯಾಯ ಕಾಲಕ್ಕೆ ತಕ್ಕಮಟ್ಟಿಗೆ ಸುಸಂಬದ್ಧವಾದ ಗ್ರಂಥಗಳು ಮುಂದೆ ಬಹುಭಾಗ ಅಸಂಬದ್ಧ ವಾಗಬಹುದು. ಈ ಗ್ರಂಥಗಳೆಲ್ಲಾ ದೇವರವಾಣಿ ಎಂದು ಹೇಳುವುದು ತಪ್ಪಾಗುತ್ತದೆ. ದೇವರಿಗೆ ಅಪಚಾರ ಮಾಡಿದ ಹಾಗಾಗುತ್ತದೆ. ವಾಸ್ತವಿಕ ವಾಗಿ ವಿಮರ್ಶೆ ಮಾಡಿದಾಗ ಎಲ್ಲ ಗ್ರಂಥಗಳಲ್ಲಿಯೂ ವಿರೋಧಾಭಾಸದ ಸನ್ನಿ ವೇಶಗಳು ವಿಪುಲವಾಗಿ ಸಿಕ್ಕುತ್ತವೆ. ಜೀವನವು ಸತ್ಯ, ಅಹಿಂಸೆ, ಅನುಕಂಪ, ನಿಸ್ವಾರ್ಥತೆಯಿಂದ ಕೂಡಿರಬೇಕೆಂಬ ತತ್ತ್ವ ಎಲ್ಲಾ ಕಾಲಕ್ಕೂ ಎಲ್ಲಾ ಜನಗಳಿಗೂ ಅನ್ವಯಿಸುವುದು. ಆ ತತ್ತ್ವಗಳಲ್ಲಿ ಮಾತ್ರ ನಂಬಿಕೆ ಇದ್ದು ಅವುಗಳ ಅನುಷ್ಠಾನದಲ್ಲಿ ತೊಡಗಿದ್ದರೆ ಧರ್ಮಾಂಧತೆ ಬೆಳೆಯುತ್ತಿರಲಿಲ್ಲ.

‘ ಅ ’ ಕಾರದಿಂದ ‘ ಕ್ಷ ’ ಕಾರದವರೆಗೆ ಆ ಗ್ರಂಥಗಳಲ್ಲಿರುವುದೆಲ್ಲಾ ನಿತ್ಯಸತ್ಯ ಎಂಬ ಮೊಂಡುವಾದ ಅಸಂಬದ್ಧ ಪ್ರಲಾಪವಾಗುತ್ತದೆ. ಮತಾಂಧತೆಗೆ ಬುನಾದಿಯಾಗುತ್ತದೆ. ಅಂಧಶ್ರದ್ಧೆಯಿಂದ ತಾರ್ಕಿಕಮನೋಭಾವ ಕುಗ್ಗು ತ್ತದೆ. ಯೋಚನಾಶಕ್ತಿ ಮೊಂಡಾಗುತ್ತದೆ.

**ಶೋಷಣೆಯ ಸಾಧನ**

ಎಲ್ಲಾ ಧರ್ಮಗಳಿಗೂ ಇತಿಮಿತಿಗಳಿದ್ದಮೇಲೆ ಅವುಗಳ ಶಾಖೋಪಶಾಖೆ ಗಳಿಗಾಗಲೀ ಅಥವಾ ಅವುಗಳ ಉಪೋತ್ಪತ್ತಿ (Bye products) ಗಳಿ ಗಾಗಲೀ ಸೀಮಿತ ಅರ್ಥವಿದೆ ಎಂದು ಹೇಳಬೇಕಾದ ಅಗತ್ಯವೇ ಇಲ್ಲ. ಹಿಂದೂಧರ್ಮದ ಆಧಾರದ ಮೇಲೆ ಹುಟ್ಟಿರುವ ಜಾತಿ ಒಂದು ಅಮಾನುಷ ಪದ್ಧತಿ, ಅದೊಂದು ಶಾಪ. ಹುಟ್ಟಿನ ಮೇಲೆ ಒಬ್ಬ ಮನುಷ್ಯನ ಗುಣಾವ ಗುಣಗಳನ್ನು ಜೀವಪರ್ಯಂತ ವಿಧಿಸುವುದು ಅಪೂರ್ವ ಅನ್ಯಾಯ. ಜಾತಿ ಪದ್ಧತಿಗೆ ಯಾವ ಉದ್ಗ್ರಂಥದ ಆಧಾರವಿದ್ದರೂ ಅದಕ್ಕೆ ಅರ್ಥವಿಲ್ಲ. ಜಾತಿಮತಗಳಲ್ಲಿ ನಂಬಿಕೆ ಇರುವವನು ಎಂತಹ ಬುದ್ಧಿವಂತನಾಗಲೀ, ಪಂಡಿತ ನಾಗಲೀ ಅವನ ಮಾತಿಗೆ ಬೆಲೆ ಇಲ್ಲ. ಎಷ್ಟೋ ಸಲ ಧರ್ಮಗ್ರಂಥಗಳ ಅರ್ಥ ವ್ಯಾಖ್ಯಾನಕಾರನ ಚಾಕಚಕ್ಯತೆಯ ಮೇಲೆ ಅವಲಂಬಿಸುತ್ತದೆ. ಒಟ್ಟಿನಲ್ಲಿ ಅವನೊಬ್ಬ ಸ್ವಾರ್ಥಿಯಾಗುತ್ತಾನೆ. ತಿಳಿದೋ ತಿಳಿಯದೆಯೋ ಧರ್ಮವನ್ನು ಶೋಷಣೆಯ ಸಾಧನವನ್ನಾಗಿ ಉಪಯೋಗಿಸಿಕೊಳ್ಳುತ್ತಾನೆ.

ಜಾತ್ಯಂಧನಿಗೆ ತನ್ನ ಧರ್ಮ, ಜಾತಿ, ಉಪಜಾತಿ, ಒಳ ಉಪಜಾತಿಗಳೇ ಅತ್ಯಂತ ಶ್ರೇಷ್ಠ. ಅವನಿಗೆ ಇವೆಲ್ಲವೂ ದೈವದತ್ತವೇ ! ಜಾತ್ಯಂಧತೆ ಉತ್ತಮ ಜಾತಿಗಳಿಗೆ ಮಾತ್ರ ಮೀಸಲಾಗಿಲ್ಲ. ಎಲ್ಲ ಹಂತಗಳಲ್ಲಿಯೂ ಇದನ್ನು ನೋಡಬಹುದು. ಉಳಿದೆಲ್ಲ ಜಾತಿಗಳಿಗಿಂತ ನಿಕೃಷ್ಟವೆಂದು ಎಣಿಸಲ್ಪಟ್ಟ ಹರಿಜನರಲ್ಲಿನ ಬಲಗೈ ಪಂಗಡ ಎಡಗೈ ಪಂಗಡಕ್ಕಿಂತ ಬಹು ‘ ಶ್ರೇಷ್ಠ ’. ಆ ಶ್ರೇಷ್ಠತೆಯನ್ನು ಸ್ಥಾಪಿಸಲು ಹಣಾಹಣಿ ಆಗುವುದು ಅಸಹಜವಲ್ಲ. ಅಂತೆಯೇ ಈ ಸಮಸ್ಯೆ ಉಳಿದ ಜಾತಿಗಳಲ್ಲಿಯೂ ಇದ್ದು ಸಮಾಜ ನುಚ್ಚು ನೂರಾಗಿ ಒಡೆದುಹೋಗಿದೆ. ಮತಾಂಧರಿಂದ ತಾರ್ಕಿಕ ಮನೋಭಾವವನ್ನು ನಿರೀಕ್ಷಿಸುವುದಕ್ಕಾಗುವುದಿಲ್ಲ. ಯಾವುದೋ ಸನ್ನಿವೇಶದಲ್ಲಿ, ಕಾಲದಲ್ಲಿ,

ಸಮಾಜದ ಕೆಲಸ ಕಾರ್ಯಗಳು ಸುಲಲಿತವಾಗಿ ನಡೆಯಲಿ ಎಂಬ ಸದುದ್ದೇಶದಿಂದ ಮಾಡಿದ ಈ ಪಂಗಡಗಳು ಕಾಲಕ್ರಮೇಣ ತುಂಬಾ ಕಟ್ಟುನಿಟ್ಟಿನ ನಿರ್ದಿಷ್ಟ ರೂಪವನ್ನು ಹೊಂದಿ ಈ ಅನಾಹುತಕ್ಕೆ ಕಾರಣವಾಯಿತು.

ಜಾತಿಪದ್ಧತಿಯಷ್ಟೇ ಅಮಾನುಷವಾದುದು ವರ್ಣಸಮಸ್ಯೆ. ಬಿಳಿಯ ಚರ್ಮದ ದೇಹ ಎಲ್ಲಾ ಸದ್ಗುಣಗಳ ಆವಾಸಸ್ಥಾನವೆನ್ನುವುದು ಮೂರ್ಖತನದ ಪರಮಾವಧಿ. ಪಾಶ್ಚಿಮಾತ್ಯ ದೇಶಗಳಲ್ಲಂತೂ ಇದೊಂದು ಬಿಡಿಸಲಾರದ ಜಟಿಲ ಸಮಸ್ಯೆಯಾಗಿದೆ. ನಮಗೆಲ್ಲಾ ತಿಳಿದ ಹಾಗೆ ತಮ್ಮ ಧರ್ಮವೇ ಸರ್ವಶ್ರೇಷ್ಠವೆನ್ನುವ ಹೆಸರಿನಲ್ಲಿ ಯೆಹೂದಿಗಳ ಹತ್ಯಾಕಾಂಡವೇ ನಡೆದುಹೋಯಿತು. ಮನುಷ್ಯನ ಇತಿಹಾಸದಲ್ಲಿ ಇದೊಂದು ಅತ್ಯಂತ ಕರಾಳ ಅಧ್ಯಾಯ.

## ನಿಕೃಷ್ಟ ವ್ಯಕ್ತಿ

ಧರ್ಮಗಳನ್ನು ರೂಪಿಸಿಕೊಂಡ ಹಾಗೆ ಸಮಾಜದ ನೀತಿನಿಯಮಗಳನ್ನೂ ಮನುಷ್ಯನೇ ನಿರ್ಮಿಸಿಕೊಂಡನು. ಎಷ್ಟಾದರೂ ಮನುಷ್ಯ ಸ್ವಾರ್ಥಿ. ಎಲ್ಲಾ ನಿಯಮಗಳನ್ನೂ ತನಗಾಗಿಯೇ ಮಾಡಿಕೊಂಡನು. ಜಾತಿಪದ್ಧತಿಯ ಉಚ್ಚನೀಚ ಕಲ್ಪನೆಯಂತೆ ಗಂಡಸಿಗೆ ಶ್ರೇಷ್ಠ ಸ್ಥಾನವನ್ನು ತಾನೇ ಕೊಟ್ಟುಕೊಂಡನು. ಹೆಂಗಸು ನಿಕೃಷ್ಟ ವ್ಯಕ್ತಿಯಾದಳು. "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಅಂದರೆ ಹೆಂಗಸು ಸ್ವಾತಂತ್ರ್ಯಕ್ಕೆ ಯೋಗ್ಯಳಲ್ಲವೆಂದು ಹೇಳಿ ಅದರಂತೆ ಆಕೆಗೆ ಸಮಾಜದಲ್ಲಿ ತಕ್ಕ ಸ್ಥಾನಮಾನಗಳನ್ನು ಕೊಡದೆ ಹೀಯಾಳಿಸಿ, ಗೋಳಾಡಿಸಿದ ಗಂಡಸು "ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾಃ" ಎಲ್ಲಿ ಸ್ತ್ರೀಯರಿಗೆ ಪೂಜ್ಯತೆ ಇದೆಯೋ ಅಲ್ಲಿ ದೇವತೆಗಳು ಸಂತುಷ್ಟರಾಗುತ್ತಾರೆಂಬ ಉಕ್ತಿಯಿಂದ, ನೊಂದ ಹೆಂಗಸಿಗೆ ಸಮಾಧಾನವನ್ನು ಅವನೇ ಹೇಳಿದನು. ಅಂತೂ ಅಡಿಗೆ ಮನೆಯೇ ಹೆಂಗಸಿನ ಆವಾಸಸ್ಥಾನವಾಯಿತು. ಎಲ್ಲಾ ಅನುಕೂಲಗಳೂ ಗಂಡಸಿಗೇ! ಹೆಂಡತಿಗೆ ಪತಿಯೇ ದೈವ. ಗಂಡಸು ಏನು ಮಾಡಿದರೂ ಅಡ್ಡಿ ಇಲ್ಲ. ಗಂಡ ಸತ್ತಾಗ ಸತಿ ಸಹಗಮನ ಮಾಡಿಕೊಂಡರೆ ಒಳ್ಳೆಯದು ಅಥವಾ ಉಳಿದ ಜೀವಮಾನವೆಲ್ಲಾ ಶೋಚನೀಯ ಸ್ಥಿತಿಯಲ್ಲಿ ಕಳೆಯಬೇಕು. ಹೆಂಡತಿ ಸತ್ತಮೇಲೆ



ಗಂಡ ಇನ್ನೊಂದು ಮದುವೆಯಾಗುವುದು ತುಂಬಾ ಒಳ್ಳೆಯದು. ಗಂಡ ವೈಭವದಿಂದ ಜೀವನ ನಡೆಸಲು ಯಾವ ಅಡ್ಡಿಯೂ ಇಲ್ಲ. ಕೆಲವು ಧರ್ಮಗಳಲ್ಲಿ ಸ್ತ್ರೀಯರು ಧರ್ಮಗ್ರಂಥಗಳನ್ನು ಓದುವ ಹಕ್ಕು ಪಡೆದಿಲ್ಲ. ಇನ್ನೂ ಕೆಲವು ಧರ್ಮಗ್ರಂಥಗಳಂತೆ ಹೆಂಗಸರಿಗೆ ಮೋಕ್ಷವೇ ಇಲ್ಲ! ಮೋಕ್ಷ ಸಿಗುವ ಅವಕಾಶ ಪಡೆಯಬೇಕಾದರೆ ಮುಂದಿನ ಜನ್ಮದಲ್ಲಿ ಗಂಡಸಾಗಿ ಹುಟ್ಟಬೇಕು. ಈ ಸಂಪ್ರದಾಯಗಳೆಲ್ಲವೂ ಎಂತಹ ತಾರ್ಕಿಕ ಮನೋಭಾವನೆಯಿಂದ ಆದ ಫಲಗಳು ಎಂದು ಹೇಳಬೇಕಾಗಿಲ್ಲ. ಸ್ವಾರ್ಥಕ್ಕೂ ವೈಚಾರಿಕ ಮನೋಭಾವನೆಗೂ ಎಂದೂ ಹೊಂದಾಣಿಕೆಯಾಗುವುದಿಲ್ಲ.

### ಅನುಕರಣೆ

ಒಂದು ಜಾತಿಗೂ ಇನ್ನೊಂದು ಜಾತಿಗೂ ಇರುವ ಮೂಲ ವ್ಯತ್ಯಾಸ ಸಂಪ್ರದಾಯ ಅಥವಾ ಕರ್ಮ (Ritual). ಬಹು ಸಂಪ್ರದಾಯಗಳು ಅರ್ಥಹೀನವಾದುವು. ಯಾಂತ್ರಿಕವಾಗಿ ಆಚರಿಸಲ್ಪಡುವ ಕರ್ಮ ಪದ್ಧತಿಗಳು ಬುದ್ಧಿಶಕ್ತಿಯನ್ನು ಮೊಟಕು ಮಾಡುತ್ತವೆ. ಈ ಸಂದರ್ಭದಲ್ಲಿ ನಾನು ಬೆಂಗಳೂರಿನ ಶ್ರೀ ರಾಮಕೃಷ್ಣಾಶ್ರಮದಲ್ಲಿ 26 ವರ್ಷಗಳ ಹಿಂದೆ ವಿದ್ಯಾರ್ಥಿಯಾಗಿದ್ದಾಗ ಪೂಜ್ಯ ಸ್ವಾಮಿ ತ್ಯಾಗೀಶಾನಂದಜೀಯವರು ತಮ್ಮ ಪ್ರವಚನದಲ್ಲಿ ಹೇಳಿದ ಎರಡು ಉದಾಹರಣೆಗಳನ್ನು ಕೊಡಲಿಚ್ಛಿಸುತ್ತೇನೆ.

ಒಬ್ಬ ಆಚಾರವಂತರ ಮನೆಯಲ್ಲಿ ಒಂದು ಬೆಕ್ಕು ಇದ್ದಿತು. ಅವರ ಮನೆಯಲ್ಲಿ ತಿಥಿ ಮಾಡುವ ದಿವಸ ಆ ಬೆಕ್ಕಿನ ಚಲನವಲನಗಳನ್ನು ತಪ್ಪಿಸಲು ಅದನ್ನು ಮನೆಯಲ್ಲಿನ ಕಂಭಕ್ಕೆ ಕಟ್ಟಿ ಕರ್ಮಾದಿಗಳನ್ನು ಮನೆಯ ಯಜಮಾನ ನಡೆಸುತ್ತಿದ್ದನು. ತಿಥಿಯಲ್ಲಿ ಮಾಡುವ ಕರ್ಮಗಳಾಗಲಿ ಅಥವಾ ಅವುಗಳ ಅರ್ಥವಾಗಲಿ ಆ ಮನೆಯಲ್ಲಿನ ಮಕ್ಕಳಿಗೆ ತಿಳಿದಿರಲಿಲ್ಲ. ಅನೇಕ ದೊಡ್ಡವರಿಗೂ ಹಿಂದೆ ತಿಳಿದಿರಲಿಲ್ಲವೆಂದರೆ ತಪ್ಪಾಗಲಾರದು. ಈ ಸ್ಥಿತಿ ಈಗಲೂ ನಿಜ. ಬೆಕ್ಕನ್ನು ಕಂಭಕ್ಕೆ ಕಟ್ಟುವುದು ತಿಥಿಯ ವಿಧಿವತ್ತಾದ ಒಂದು ಭಾಗವೆಂದು ಮಕ್ಕಳ ಭಾವನೆಯಾಗಿದ್ದಿತು. ಮನೆಯ ಯಜಮಾನ ದೈವಾಧೀನನಾದನು. ಆಮೇಲೆ ಬೆಕ್ಕೂ ಕಾಲವಾಯಿತು. ಮಕ್ಕಳು ತಮ್ಮ ತಂದೆಯ ತಿಥಿಯ ದಿನ ಪಕ್ಕದ ಮನೆಯ ಬೆಕ್ಕನ್ನು ತಂದು ಕಂಭಕ್ಕೆ ಕಟ್ಟಿ ತಿಥಿಯನ್ನು

ಮಾಡುತ್ತಿದ್ದರು. ಈ ಪದ್ಧತಿ ಆ ಪಂಗಡದ ಜನಗಳಿಗೆ ತಿಥಿಯ ಒಂದು ಭಾಗವಾಯಿತು.

ಇನ್ನೊಂದು ಉದಾಹರಣೆ. ದಕ್ಷಿಣ ದೇಶದ ಒಬ್ಬ ಪಂಡಿತರು ಸೂರ್ಯ ಗ್ರಹಣ ವಿಮೋಚನೆಯಾದ ಮೇಲೆ, ಕಾವೇರಿ ನದಿಗೆ ಸ್ನಾನ ಮಾಡಲು ಹೋದರು. ನದಿಯಲ್ಲಿ ಆಗಲೇ ಅನೇಕ ಮಂದಿ ಸ್ನಾನ ಮಾಡುತ್ತಿದ್ದರು. ನದಿಯ ದಂಡೆಯ ಮೇಲೆ ಎಲ್ಲೆಲ್ಲೂ ತಾಮ್ರದ ತಂಬಿಗೆಗಳಿದ್ದುವು. ಆ ಪಂಡಿತರು ತಮ್ಮ ತಾಮ್ರದ ತಂಬಿಗೆಯನ್ನು ಆ ದಂಡೆಯ ಮೇಲಿಟ್ಟು, ಗುರುತಿಗಾಗಿ ಆ ತಂಬಿಗೆಯೊಳಕ್ಕೆ ಸ್ವಲ್ಪ ಮರಳನ್ನು ಹಾಕಿ ಸ್ನಾನಕ್ಕಾಗಿ ನದಿಯಲ್ಲಿ ಇಳಿದರು. ಆ ವಿದ್ವಾಂಸರು ಮರಳು ಹಾಕಿದ್ದನ್ನು ನೋಡಿದ ಇತರ ಅನೇಕ ಮಂದಿ ಇದರಲ್ಲಿ ' ಏನೋ ವಿಶೇಷ ಅರ್ಥವಿದೆ ' ಎಂದು ಭಾವಿಸಿ ತಾವೂ ಕೂಡ ತಮ್ಮ ತಮ್ಮ ತಂಬಿಗೆಗಳಲ್ಲಿ ಸ್ವಲ್ಪ ಸ್ವಲ್ಪ ಮರಳನ್ನು ಹಾಕಿದರು. ವಿದ್ವಾಂಸರು ಸ್ನಾನ ಮುಗಿದ ಮೇಲೆ ತಮ್ಮ ತಂಬಿಗೆಯನ್ನು ಹುಡುಕಲು ಪರದಾಡಬೇಕಾಯಿತು. ಬಹು ತಂಬಿಗೆಗಳಲ್ಲಿ ಮರಳು! ' ಅಯ್ಯೋ ಭಗವಂತ! ಹೀಗೂ ಉಂಟೇ!' ಎಂದು ಆ ವಿದ್ವಾಂಸರು ತಲೆ ಚಚ್ಚಿಕೊಂಡರು.

ಜನಗಳು ಮಾಡಿದ್ದು ಅರ್ಥವಿಲ್ಲದ ಅನುಕರಣೆ. ಗ್ರಹಣದ ದಿನ ಪಂಡಿತರು ಮಾಡಿದ್ದು, ತಿಥಿಯ ದಿನ ಆಚಾರವಂತರು ಮಾಡಿದ್ದು ಎಲ್ಲಾ ಅನುಕರಣೆಯೆ! ಅಪ್ಪ ಮಾಡಿದ್ದನ್ನು ಮಗ ಯಾಂತ್ರಿಕವಾಗಿ ಮಾಡುತ್ತಾನೆ. ಮಾಡುವ ಕೆಲಸಗಳಿಗೆ ಅವನು ಅರ್ಥ ಕೇಳುವ ಗೋಜಿಗೆ ಹೋಗುವುದಿಲ್ಲ. ಅಲ್ಲದೆ ಕರ್ಮಗಳಿಗೆ ಅರ್ಥ ಕೇಳಬೇಕೆಂಬ ಮನೋಭಾವನೆಯನ್ನು ದೊಡ್ಡವರು ರೂಪಿಸಿಲ್ಲ. ಅಪ್ಪಿತಪ್ಪಿ ಅಂತಹ ಪ್ರಶ್ನೆಗಳನ್ನು ಕೇಳಿದಾಗ ತಾರ್ಕಿಕ ಮನೋಭಾವ ' ತಲೆಹರಟೆ ' ಮನೋಭಾವವಾಗುತ್ತದೆ. ಇಂತಹ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರ ಹೇಳುವ ಶಕ್ತಿ ಸಾಮಾನ್ಯವಾಗಿ ದೊಡ್ಡವರಲ್ಲಿಲ್ಲ.

## ಬಂಧನ

ಅರ್ಥವಿಲ್ಲದ ಎಲ್ಲಾ ಸಂಪ್ರದಾಯಗಳೂ ಬಂಧನವೇ! ಜೀವನಕ್ಕೆ ಅಡ್ಡಿ ಆತಂಕಗಳಿಲ್ಲದೆ, ಸುಭಿಕ್ಷವಾಗಿದ್ದ, ವಿಜ್ಞಾನದ ಸೋಂಕಿಲ್ಲದ ಕಾಲದಲ್ಲಿ ತಕ್ಕಮಟ್ಟಿಗೆ ಪಕ್ವವಾದ ಬುದ್ಧಿಯಿಂದ ಕೂಡಿದ ಕಲ್ಪನಾ ಫಲವೇ ಈ ಅಸಂಖ್ಯಾತ ಸಂಪ್ರದಾಯಗಳು, ಕರ್ಮಗಳು ಮತ್ತು ವಿಧಿಗಳು.

ಕೆಲವು ಸಂಪ್ರದಾಯಗಳು ಕ್ಲಿಷ್ಟವಾದ ಧ್ಯೇಯಗಳ ಅರ್ಥವನ್ನು ತಿಳಿಯಲು ಮಾಡಲ್ಪಟ್ಟ ಸಾಧನಸೌಕರ್ಯಗಳು. ಯಾಂತ್ರಿಕವಾಗಿ ಅವುಗಳನ್ನು ಪುನಃಪುನಃ ಆಚರಿಸಿ ಸಂಪ್ರದಾಯಗಳೇ ಧ್ಯೇಯಗಳಾಗಿ ಹೋಗಿವೆ. ಈ ಸಂಪ್ರದಾಯಗಳು ಮನುಷ್ಯರನ್ನು ವಿವೇಚನಾ ಶೂನ್ಯರನ್ನಾಗಿ ಮಾಡಿವೆ.

ಕರ್ಮಗಳು, ಸಂಪ್ರದಾಯಗಳು ಇಲ್ಲದ ಜೀವನ ಬರಡು ಜೀವನವಾಗುತ್ತದೆ, ಮಂಕಾಗುತ್ತದೆ ಎಂದು ಹಲವರ ವಾದ. ಬಾಳಿಗೊಂದು ನಂಬಿಕೆಯ ಆವಶ್ಯಕತೆಯನ್ನು ಸಮರ್ಥಿಸುತ್ತಾರೆ. ನಂಬಿಕೆ ಜೀವನಕ್ಕೆ ಅಗತ್ಯವಾಗಿದ್ದರೂ ಅದು ಮೂಢ ನಂಬಿಕೆಯಾಗಬಾರದು. ವಿವಿಧ ಧರ್ಮಗಳು ರೂಪಿಸಿರುವ ಅರ್ಥವಿಲ್ಲದ ಆಚರಣೆಗಳಿಗೆ ಬದಲಾಗಿ ಜೀವನದಲ್ಲಿ ಶಾಶ್ವತವಾದ ಮಾನವೀಯ ಮೌಲ್ಯಗಳಿಗೆ ಪುಷ್ಟಿಸಿಗಬೇಕು. ಅನುಕಂಪ, ನತದೃಷ್ಟರ ಸೇವೆ, ಎಲ್ಲಾ ವಿಧವಾದ ಶೋಷಣೆಗಳಿಗೆ ಪ್ರತಿಭಟನೆ, ಇವು ಎಲ್ಲ ಜನಗಳ ಜೀವಪರ್ಯಂತ ನಂಬಿಕೆಗಳಾಗಬೇಕು. ಬಡವನಿಗೆ ಸಹಾಯ ಮಾಡಿದಾಗ, ನೊಂದವನ ಕಣ್ಣೀರನ್ನು ಕಡಿಮೆ ಮಾಡಿದಾಗ, ಕಷ್ಟದಲ್ಲಿರುವವರನ್ನು ಆತ್ಮೀಯತೆಯಿಂದ ಸಮಾಧಾನ ಮಾಡಿದಾಗ, ಹಸಿದವನಿಗೆ ಅನ್ನವನ್ನು ಕೊಟ್ಟಾಗ, ಆಗುವ ಆನಂದ ವರ್ಣನಾತೀತ. ಈ ಮಾನವೀಯ ಮೌಲ್ಯಗಳು ಜೀವನಕ್ಕೆ ಅಡಿಪಾಯವಾಗಬೇಕು.

## ಮೂಢ ನಂಬಿಕೆಗಳು

ಮೂಢ ನಂಬಿಕೆಗಳೂ ಸಂಪ್ರದಾಯಗಳೇ! ಅಪೂರ್ಣ ಜ್ಞಾನ ಮೂಢ ನಂಬಿಕೆಗಳಿಗೆ ತಳಹದಿ. ಎಷ್ಟೋ ಸಲ ಮೂಢ ನಂಬಿಕೆಗಳೇ ಆಧ್ಯಾತ್ಮಿಕ ವಿಷಯಗಳೆಂದು ಪರಿಗಣಿಸಲ್ಪಟ್ಟವೆ. ಹೆಚ್ಚು ಮೂಢ ನಂಬಿಕಸ್ಥನು ಕಡಿಮೆ

ಮೂಢ ನಂಬಿಕಸ್ಥನನ್ನು ನಾಸ್ತಿಕನೆಂದು ಕರೆದರೂ ಹೆಚ್ಚಲ್ಲ. ಕೆಲವು ಅದ್ವೈತಿಗಳಿಗೆ ಬುದ್ಧ ನಾಸ್ತಿಕ. ಹಲವು ದ್ವೈತಿಗಳಿಗೆ ಅದ್ವೈತಿಯು ಪ್ರಚ್ಛನ್ನ ಬುದ್ಧ.

ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಮೂಢ ನಂಬಿಕೆಗಳು ವಿಪುಲವಾಗಿ ಬೆಳೆದು ಹಬ್ಬಿವೆ. ನಮ್ಮ ದೇಶದಲ್ಲಿ ಹಲವರಿಗೆ ಯಾವ ಬಣ್ಣದ ಬೆಕ್ಕು ಅಡ್ಡಹೋಗುವುದೂ ಅಶುಭ. ಪಾಶ್ಚಿಮಾತ್ಯ ದೇಶಗಳಲ್ಲಿ ಈ ಅವಲಕ್ಷಣ ಕಪ್ಪು ಬೆಕ್ಕಿಗೆ ಮಾತ್ರ ಮೀಸಲು. ಸಹಜವಾದ ಅಂಗೈಗೆರೆಗಳಿಗೆ ಎಲ್ಲ ದೇಶಗಳಲ್ಲಿಯೂ ಮಹದರ್ಥ ಕೊಡಲಾಗಿದೆ. ಬುಡುಬುಡಿಕೆಯವನು ತ್ರಿಕಾಲ ಜ್ಞಾನಿಯಾದ. ಹಲ್ಲಿಯ ಲೊಚಗುಟ್ಟುವಿಕೆಯಲ್ಲಿ ಮನುಷ್ಯ ಸಂದೇಶವನ್ನು ಕಲ್ಪಿಸಿಕೊಂಡನು. ಮಂಗಳವಾರ ಅಮಂಗಳದ ಚಿಹ್ನೆಯಾಯಿತು. ಮತ್ತೆ ಕೆಲವರಿಗೆ ಅದು ಪವಿತ್ರ ಪ್ರಾರ್ಥನಾ ದಿನವಾಯಿತು. ದಿನದ ಇಂತಿಷ್ಟು ಕಾಲ ರಾಹುಕಾಲ, ಗುಳಿಕಕಾಲ, ಯಮಗಂಡಕಾಲಗಳಾಗಿ ಶುಭಕಾರ್ಯಗಳಿಗೆ ನಿಷೇಧವಾಯಿತು. ಇನ್ನು ಕೆಲವರಿಗೆ ಎಲ್ಲಾ ಕಾಲವೂ ಒಂದೇ. ಮುಂಜಾನೆಯಿಂದ ಮಲಗುವತನಕ ಜೀವನ ಮೂಢನಂಬಿಕೆಗಳ ಮಯವಾಯಿತು. ಯಾವ ದಿಕ್ಕಿಗೆ ಮಲಗಬೇಕು? ಎಡಗಡೆ ಏಳಬೇಕೆ? ಬಲಗಡೆ ಏಳಬೇಕೆ? ಎಷ್ಟು ಸೀನು ಸೀತರೆ ಒಳ್ಳೆಯದು? ಕೆಲವು ಸಂಖ್ಯೆಗಳು ಒಳ್ಳೆಯವು ಮತ್ತೆ ಕೆಲವು ಕೆಟ್ಟವು. ಕೆಲವರಿಗೆ ಏಳನೆಯ ಸಂಖ್ಯೆ ಅನಿಷ್ಟ ಸೂಚಕ ಮತ್ತೆ ಕೆಲವರಿಗೆ ಹದಿಮೂರನೆಯ ಸಂಖ್ಯೆ ಒಳ್ಳೆಯದಲ್ಲ. ಹೀಗೆ ಸಂಖ್ಯಾಶಾಸ್ತ್ರವೇ ಬೆಳೆದು ಹೋಗಿದೆ. ಕೆಲವರ ಕಣ್ಣುದೃಷ್ಟಿ ಕೆಡಕನ್ನುಂಟುಮಾಡುತ್ತದೆ. ಈಗಲೂ 'ದೃಷ್ಟಿ' ತೆಗೆಯಲು ಹಂಚಿಕಡ್ಡಿ ನಿವಾಳಿಸಿ ಅದಕ್ಕೆ ಬೆಂಕಿ ಹಚ್ಚಿ ಮೂಲೆಯಲ್ಲಿ ನಿಲ್ಲಿಸುವುದು ಅಪರೂಪವಲ್ಲ. ಕೈಗುಣ ಕಾಲುಗುಣಗಳಲ್ಲಿಯೂ ನಂಬಿಕೆ ಇದೆ. ಹೆಣ್ಣುಮಗು ಮದುವೆಯಾಗಿ ಮನೆಗೆ ಬಂದ ಹೊಸದರಲ್ಲಿ ಏನಾದರೂ ಅಕಸ್ಮಾತ್ತಾಗಿ ಕೆಟ್ಟದ್ದು ಸಂಭವಿಸಿದರೆ ಆಯಿತು, ಆ ಹೆಣ್ಣಿನ ಜೀವನ. ಪಾಪ! ಮನೆಯವರೆಲ್ಲರ ಶಾಪ ಆ ಅಬಲೆಯ ಮೇಲೆ. ಆಕೆಯ ಜೀವನ ನರಕಪ್ರಾಯ.

## ಜ್ಯೋತಿಷ

ಹಸ್ತ ಸಾಮುದ್ರಿಕಾ ಶಾಸ್ತ್ರ, ಸಂಖ್ಯಾ ಶಾಸ್ತ್ರ, ಹಕ್ಕಿಬಿಕ್ಕಿ ಶಾಸ್ತ್ರಗಳಂತೆ ಜೋತಿಶ್ಯಾಸ್ತ್ರವೂ ಎಲ್ಲಾ ದೇಶಗಳಲ್ಲಿಯೂ ಬೆಳೆದುಕೊಂಡು ಬಂದಿದೆ. ಈ ಶಾಸ್ತ್ರವು ಬಹು ಪುರಾತನವಾದುದು. ಪ್ರತಿ ಮನುಷ್ಯನ ಮೇಲೆ ಗ್ರಹಗಳ ಪರಿಣಾಮ ಉಂಟೆಂದು ಮನುಷ್ಯನು ಭಾವಿಸಿಕೊಂಡು ಒಂದು ಶಾಸ್ತ್ರವನ್ನೇ ಸೃಷ್ಟಿಮಾಡಿಕೊಂಡಿದ್ದಾನೆ. ಒಂದು ಸಮಾಧಾನದ ವಿಷಯವೆಂದರೆ ಪ್ರಪಂಚ ದಲ್ಲಿ ಸಾಮಾನ್ಯವಾಗಿ ಯಾವ ಇಬ್ಬರು ಜ್ಯೋತಿಷಿಗಳಲ್ಲಿಯೂ ಒಡಂಬಡಿಕೆ ಇಲ್ಲ. ಪ್ರತಿಯೊಬ್ಬ ಜ್ಯೋತಿಷಿ ತನ್ನದೇ ಆದ ತರ್ಕ, ವ್ಯಾಖ್ಯಾನ, ಅರ್ಥ ವನ್ನು ಕೊಡುತ್ತಾನೆ. ಭವಿಷ್ಯವನ್ನು, ಖಚಿತವಾಗಿ, ಸಮಂಜಸವಾಗಿ ಹೇಳಿದ ಒಬ್ಬ ಜ್ಯೋತಿಷಿಯಾದರೂ ಪ್ರಪಂಚದಲ್ಲಿ ಇನ್ನೂ ಹುಟ್ಟಿಲ್ಲ. ಜ್ಯೋತಿಷಿಗಳು ಬುದ್ಧಿವಂತರು. ಎಷ್ಟೋ ಸಲ ಅವರು ಹೇಳುವ ಭವಿಷ್ಯ ಅಸ್ಪಷ್ಟ – ಅಡ್ಡ ಗೋಡೆಯ ಮೇಲಿನ ದೀಪ. ಆಟೋರಿಕ್ಷಾ ಪಕ್ಕದಲ್ಲಿ ಹಾಯ್ದು ಹೋದಾಗ ವಾಹನ ಭಯದ ಭವಿಷ್ಯ ನಿಜವೆಂದು ತೃಪ್ತಿಪಟ್ಟುಕೊಳ್ಳಬಹುದು.

ವಿಜ್ಞಾನದ ಅಂತಸ್ಥಿಗೆ ಜ್ಯೋತಿಶ್ಯಾಸ್ತ್ರವನ್ನು ಏರಿಸಬೇಕೆಂದು ಪ್ರಪಂಚದಾದ್ಯಂತ ಕೆಲವು ಜ್ಯೋತಿಷಿಗಳು ಬೊಬ್ಬೆ ಹಾಕುತ್ತಿದ್ದಾರೆ. ಜ್ಯೋತಿಶ್ಯಾಸ್ತ್ರವು ವಿಜ್ಞಾನವಾಗಲಿ, ಸುಜ್ಞಾನವಾಗಲಿ, ಅಜ್ಞಾನ ವಾಗಲಿ–ಏನೇ ಆಗಲಿ ಇಷ್ಟು ಮಾತ್ರ ನಿಜ. ದುರ್ಬಲ ಹೃದಯರ, ಸುಲಭ ವಾಗಿ ಮೋಸ ಹೋಗುವ ಜನರ ಶೋಷಣೆ ಇದರಿಂದ ಯಥಾಶಕ್ತಿ ನಡೆಯು ತ್ತಿದೆ. ಬಹು ಜ್ಯೋತಿಷಿಗಳಿಗೆ ಇದು ಒಳ್ಳೆಯ ಜೀವನ ಮಾರ್ಗವಾಗಿದೆ. 'ಉದರ ನಿಮಿತ್ತಂ ಬಹುಕೃತ ವೇಷಃ'.

## ಮೈಮೇಲೆ ದೇವರು

ಪ್ರಪಂಚದ ಎಲ್ಲಾ ದೇಶಗಳಲ್ಲಿಯೂ ಪವಾಡಗಳಲ್ಲಿ ನಂಬಿಕೆ. ನಮ್ಮ ದೇಶದಲ್ಲಂತೂ ಪವಾಡಗಳೋ ಪವಾಡ! ನಮ್ಮಲ್ಲಿ ಸೃಷ್ಟಿಕರ್ತರು ಬಹು ಮಂದಿ. ಕೈ ಬೀಸಿದರೆ ವಸ್ತುಗಳ ಸೃಷ್ಟಿ. ದೇವರು ಮನುಷ್ಯರ ಮೇಲೆ ಮೈ ದುಂಬಿ ಬರುವುದು ನಮ್ಮ ದೇಶದಲ್ಲಿ ಸರ್ವೇಸಾಮಾನ್ಯ. ಹೀಗೆ ನಮ್ಮಲ್ಲಿ ಬಹುಮಂದಿಗೆ ದೇವರ ಸಾಕ್ಷಾತ್ಕಾರವಾಗಿದೆ! ಹಿಂದಿನ ಕಾಲದಲ್ಲಿ ದೇವರನ್ನು

ನೋಡಲು ಅಥವಾ ದೇವರ ಕೃಪೆಗೆ ಪಾತ್ರರಾಗಲು ಬಹು ಉಗ್ರವಾದ ತಪಸ್ಸು ಮಾಡಬೇಕಾಗಿದ್ದಿತು. ಸಂಯಮದ ಜೀವನ ನಡೆಸಬೇಕಾಗಿದ್ದಿತು. ಹಿಂದಿನ ಕಾಲದ ದೇವರಿಗೆ ತುಂಬಾ ಜಂಭ ಹೆಚ್ಚು! ಈಗ ದೇವರು ತನ್ನ ಪ್ರತಿಷ್ಠೆಯನ್ನು ಬಿಟ್ಟು ಕೈಕಾಲಿಗೆ ಸಿಕ್ಕಿದವರಿಗೆಲ್ಲಾ ಪ್ರತ್ಯಕ್ಷನಾಗುತ್ತಾನೆ! ದೇವರು ಸರ್ವಾಂತರ್ಯಾಮಿ ಎಂದು ಹೆಸರು ಪಡೆದಿದ್ದರೂ ದೇವರ ಮಹಿಮೆ ಪ್ರಪಂಚದ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಈ ಸ್ಥಳಗಳು ಪುಣ್ಯ ಕ್ಷೇತ್ರಗಳಾಗುತ್ತವೆ. ಇವುಗಳೆಲ್ಲಾ ಪ್ರಪಂಚದಾದ್ಯಂತ ಜನಗಳಲ್ಲಿರುವ ನಂಬಿಕೆಗಳು. ಈ ನಂಬಿಕೆಗಳ ವಿಮರ್ಶೆಯನ್ನು ವೈಜ್ಞಾನಿಕ ದೃಷ್ಟಿಯ ಬೆಳಕಿನಲ್ಲಿ ಪರಿಶೀಲಿಸಬೇಕು.

## ಅನ್ವೇಷಣೆ

ಮನುಷ್ಯನ ಬುದ್ಧಿಶಕ್ತಿ ಬೆಳೆದಹಾಗೆಲ್ಲಾ ಅವನು ನಿಸರ್ಗದ ಘಟನೆಗಳನ್ನು ತಾರ್ಕಿಕವಾಗಿ ಅರ್ಥ ಮಾಡಿಕೊಳ್ಳಲು ಮೊದಲು ಮಾಡಿದನು. ವಿಪುಲವಾಗಿ ಪ್ರಶ್ನೆಗಳನ್ನು ಹಾಕಿಕೊಂಡು ಸಮಂಜಸವಾದ ಉತ್ತರವನ್ನು ಹುಡುಕಲು ಜೀವಮಾನವನ್ನೇ ಕಳೆದನು. ಇಂತಹ ಅನ್ವೇಷಣೆಯೇ ವಿಜ್ಞಾನಕ್ಕೆ ಜನ್ಮವಿತ್ತಿತು. ಈ ವೈಜ್ಞಾನಿಕ ಮಾರ್ಗದಿಂದ ಅನೇಕ ಜಟಿಲ ಸಮಸ್ಯೆಗಳಿಗೆ ಉತ್ತರ ಸಿಕ್ಕಿತು. ಕೈತಪ್ಪಿದ ಕಲ್ಲು ಕೆಳಗೇ ಏಕೆ ಬೀಳಬೇಕೆಂದು ವಿಜ್ಞಾನಿ ನ್ಯೂಟನ್ ಗಾಢವಾಗಿ ಆಲೋಚನೆ ಮಾಡಿದ ಫಲವೇ ವಿಜ್ಞಾನದಲ್ಲಿ ಬಹು ಮುಖ್ಯವಾದ ಗುರುತ್ವಾಕರ್ಷಣ ನಿಯಮದ ಜನನ.

ವಿಜ್ಞಾನ ಬೆಳೆದ ಹಾಗೆಲ್ಲಾ ಪ್ರಕೃತ್ಯತೀತವೆಂದು ಗಣಿಸಲ್ಪಟ್ಟ ಹಲವು ಘಟನೆಗಳು ಸಹಜ ಸ್ಥಿತಿಗೆ ಬಂದು ಇಳಿದವು. ಬೆಂಜಮಿನ್ ಫ್ರಾಂಕಲಿನ್ ವಿಜ್ಞಾನಿಯ ಸಂಶೋಧನೆಗಳಿಂದ ಸಿಡಿಲು, ಗುಡುಗು, ಮಿಂಚು ವಿದ್ಯುಚ್ಛಕ್ತಿಯ ಪ್ರಭಾವವೆಂದು ಖಚಿತವಾಗಿ ಸ್ಥಾಪನೆಯಾದ ಮೇಲೆ ಅವುಗಳ ಮೇಲಿನ ಹತೋಟಿ ಇಂದ್ರನ ಕೈತಪ್ಪಿ ಹೋಯಿತು! ವೈದ್ಯಕೀಯ ಕ್ಷೇತ್ರದಲ್ಲಿ ವಿಜ್ಞಾನದಿಂದ ಸಾಧಿಸಿದ ಉತ್ತಮ ಮಟ್ಟದ ಪ್ರಗತಿಯಿಂದ ವಿಪುಲವಾಗಿ ಬೆಳೆದಿದ್ದ ದೇವತೆಗಳ ಅಥವಾ ' ಅಮ್ಮ 'ಗಳ ಸಂಖ್ಯೆಯೂ ಕಡಿಮೆಯಾಯಿತು.

**ಆಘಾತ**

ವಿಜ್ಞಾನಕ್ಕೆ ಆಧಾರ ತರ್ಕ ಮತ್ತು ಪ್ರಯೋಗ. ಕೇವಲ ನಂಬಿಕೆ ಪ್ರಯೋಗಕ್ಕೆ ಮತ್ತು ಸತ್ಯಾನ್ವೇಷಣೆಗೆ ಯಾವಾಗಲೂ ಅಡ್ಡಿ. ಆದುದರಿಂದ ವೈಜ್ಞಾನಿಕ ಮಾರ್ಗಕ್ಕೂ ಮತ್ತು ನಂಬಿಕೆ ಪ್ರಾಧಾನ್ಯದಿಂದ ಬೆಳೆದು ಪುಷ್ಟಿಗೊಂಡಿದ್ದ ಧರ್ಮ, ಸಂಪ್ರದಾಯಗಳಿಗೂ ವಿರಸ ಮೊದಲಾಯಿತು. ಶತಮಾನಗಳಿಂದ ಬಂದ ನಂಬಿಕೆಗಳಿಗೆ ವಿಜ್ಞಾನದ ಬೆಳವಣಿಗೆಯಿಂದ ಏಟು ಬಿದ್ದಿತು. ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಗೊಡ್ಡು ಸಂಪ್ರದಾಯವಾದಿ ಎಲ್ಲಾ ಶಕ್ತಿಯ ಮತ್ತು ಅಧಿಕಾರದ ಸ್ವಾಮ್ಯವನ್ನು ಪಡೆದಿದ್ದನು. ವಿಜ್ಞಾನಿ ಸಾತ್ವಿಕ. ಸತ್ಯಾನ್ವೇಷಿ. ತಲೆತಲಾಂತರಗಳಿಂದ ಬಂದ ತಮ್ಮ ನಂಬಿಕೆಗಳಿಗೆ ಪೆಟ್ಟು ಬಿದ್ದದ್ದರಿಂದ ರೊಚ್ಚಿಗೆದ್ದ, ಪ್ರಭಾವಯುತ ಸಂಪ್ರದಾಯಸ್ಥರಿಂದ ವಿಜ್ಞಾನಿಗಳ ಮೇಲೆ ಅಮಾನುಷ ಕೃತ್ಯಗಳನ್ನೆಸಗಲಾಯಿತು. ಅವರಿಗೆ ಜನ್ಮಾವಧಿ ಕಾರಾಗೃಹವಾಸ ವಿಧಿಸಿದ್ದಾಯಿತು, ಶೂಲಕ್ಕೆ ಏರಿಸಿದ್ದಾಯಿತು, ಸಜೀವವಾಗಿ ಸುಟ್ಟದ್ದೂ ಆಯಿತು. ಇವೆಲ್ಲಾ ಮಧ್ಯಯುಗದಲ್ಲಿ (Middle Ages) ಯೂರೋಪ್ ಖಂಡದಲ್ಲಿ ಧರ್ಮದ ಹೆಸರಿನಲ್ಲಿ ಆದ ಅತ್ಯಂತ ಕರಾಳ ಕೃತ್ಯಗಳು. ವಿಜ್ಞಾನಿಯು ಹುತಾತ್ಮನಾದ. ಆದರೆ ಸತ್ಯಕ್ಕೆ ಚ್ಯುತಿಬರಲಿಲ್ಲ. 'ಸತ್ಯಮೇವ ಜಯತೇ ನಾನೃತಂ' ಎಂಬ ಗೀತಾ ವಾಕ್ಯಕ್ಕೆ ಸಮರ್ಥನೆ ದೊರೆಯಿತು. ಒಂದೊಂದು ಸಂಶೋಧನೆಯೂ ಮೊಂಡುವಾದಿಯ ಗೊಡ್ಡು ನಂಬಿಕೆಗೆ ಒಂದೊಂದು ಬಲವಾದ ಪೆಟ್ಟನ್ನು ಕೊಡುತ್ತಾ ಬಂದಿದೆ. ಈ ಆಘಾತದಿಂದ ಅವನು ತತ್ತರಿಸಿಹೋಗಿದ್ದಾನೆ–ಹಿಮ್ಮೆಟ್ಟುತ್ತಾನೆ. ಆದರೆ ಅವನು ಸೋಲನ್ನು ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ಅವನ ಬತ್ತಳಿಕೆಯಲ್ಲಿರುವುದು ಅಸಂಖ್ಯಾತ ಮೂಢ ನಂಬಿಕೆಗಳು. ಪ್ರಕೃತಿಯ ಘಟನೆಗಳೂ ಅಗಣಿತ. ಒಂದು ಮೂಢ ನಂಬಿಕೆಯ ಬಣ್ಣ ಬಯಲಾದೊಡನೆಯೇ "ಅದು ಬಿಡು ಪ್ರಕೃತಿ ಸಾಮಾನ್ಯವಾದ ಘಟನೆ. ಇದು ಪ್ರಕೃತ್ಯತೀತ. ಇದಕ್ಕೆ ನಿನ್ನ ವಿಜ್ಞಾನದ ವಿಶ್ಲೇಷಣೆ ಏನು?" ಎಂದು ರೋಷಾವೇಶದಿಂದ ಆರ್ಭಟಿಸುತ್ತಾ ಸಂಪ್ರದಾಯವಾದಿ ಒಂದಾದ ಮೇಲೊಂದು ಘಟನಾವಳಿಗಳನ್ನು ವಿಜ್ಞಾನಿಯ ಮುಂದೆ ಇಡುತ್ತಾನೆ. ಶಾಂತ ಸ್ವರೂಪನಾದ, ವಾಸ್ತವಿಕವಾದಿಯಾದ ವಿಜ್ಞಾನಿ ಧೃತಿಗೆಡದೆ ತನ್ನ ಸತ್ಯಾನ್ವೇಷಣೆಯ ಪಥದಲ್ಲಿ ಮುಂದೆ

ಸಾಗುತ್ತಾನೆ. ಪೆಟ್ಟಿನ ಮೇಲೆ ಪೆಟ್ಟು ಬಿದ್ದರೂ ಸಂಪ್ರದಾಯವಾದಿಗೆ ಇನ್ನೂ ಬುದ್ಧಿ ಬಂದಿಲ್ಲ. ಜಟ್ಟಿ ನೆಲಕ್ಕೆ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ವೆಂಬ ಮನೋಭಾವ ಅವನದು.

## ಪ್ರಯೋಗ

ವಿಜ್ಞಾನಿಗೆ ಸತ್ಯದ ಹೊರತು ಇನ್ನಾವುದೂ ವೇದವಾಕ್ಯವಲ್ಲ. ಎಲ್ಲಾ ಅನುಭವವನ್ನು ಪ್ರಯೋಗದ ಒರೆಗಲ್ಲಿಗೆ ಹಚ್ಚುತ್ತಾನೆ. ಈ ಅಗ್ನಿ ಪರೀಕ್ಷೆ ಯಲ್ಲಿ ಯಶಸ್ಸು ಸಿಕ್ಕಿದ್ದಕ್ಕೆ ಮಾತ್ರ ವಿಜ್ಞಾನ ತನ್ನದನ್ನಾಗಿ ಮಾಡಿಕೊಳ್ಳು ತ್ತದೆ. ಪ್ರಯೋಗದಿಂದ ಸತ್ಯವನ್ನು ಕಂಡುಹಿಡಿಯುವ ಮನೋಭಾವ ಹಿಂದೆ ಉದ್ದಾಮ ಪಂಡಿತರಲ್ಲೂ ಇರಲಿಲ್ಲ. ಈಗಲೂ ಅದರ ಅಭಾವವನ್ನು ಬಹು ಮಂದಿಯಲ್ಲಿ ನೋಡುತ್ತೇವೆ. ತತ್ತ್ವಜ್ಞಾನಿ ಅರಿಸ್ಟಾಟಲ್ ಕಾಲದಲ್ಲಿ ಹೆಂಗಸರಿಗೆ ಗಂಡಸರಿಗಿಂತ ಹಲ್ಲುಗಳ ಸಂಖ್ಯೆ ಕಡಿಮೆ ಎಂಬ ನಂಬಿಕೆ ಅವನ ದೇಶದಲ್ಲಿದ್ದಿತು. ಅರಿಸ್ಟಾಟಲ್ ಕೂಡ ಅದನ್ನು ನಂಬಿದ್ದನು. ಆತನಿಗೆ ಇಬ್ಬರು ಹೆಂಡತಿಯರಿದ್ದರೂ ಪ್ರಯೋಗದ ಮೂಲಕ ಒಬ್ಬ ಹೆಂಡತಿಯ ಹಲ್ಲು ಗಳನ್ನಾದರೂ ಎಣಿಸಿ ನಂಬಿಕೆಗೂ ವಾಸ್ತವ ಸ್ಥಿತಿಗೂ ತಾಳೆ ನೋಡುವ ಗೋಜಿಗೆ ಹೋಗಲಿಲ್ಲ. ದಿನ, ಕಾಲ, ಘಳಿಗೆ ಮುಂತಾದ ಮೂಢ ನಂಬಿಕೆ ಗಳಿಗೆ ಗಮನ ಕೊಡದೆ ನಿರ್ವಿಘ್ನವಾಗಿ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿರುವ ಅಸಂಖ್ಯಾತ ಜನರು ಇಂತಹ ವಿಷಯಗಳಲ್ಲಿ ನಂಬಿಕೆ ಇಟ್ಟು ಕೊಂಡು ಪುಕ್ಕಲುತನದ ಜೀವನ ನಡೆಸುತ್ತಿರುವ ಜನಗಳ ಮುಖಕ್ಕೆ ಮಸಿ ಯನ್ನು ನಿತ್ಯವೂ ಬಳಿಯುತ್ತಿದ್ದಾರೆ. ಭವಿಷ್ಯವನ್ನು ಸ್ಪಷ್ಟವಾಗಿ, ಖಚಿತ ವಾಗಿ, ತಪ್ಪದೆ ಪ್ರತಿ ಸಲವೂ ಸಾರ್ವಜನಿಕವಾಗಿ ತಿಳಿಸಿ ಜ್ಯೋತಿಶ್ಶಾಸ್ತ್ರದ ಸತ್ಯಾಸತ್ಯತೆಯನ್ನು ತಾಳೆ ನೋಡಲು ಅವಕಾಶ ಕೊಡಿ ಎಂಬ ವಿಜ್ಞಾನಿಯ ಸವಾಲಿಗೆ ಜ್ಯೋತಿಷಿ ಬೆಚ್ಚಿಬಿದ್ದನು. ಧೈರ್ಯಮಾಡಿ ಈ ಸವಾಲನ್ನು ಒಪ್ಪಿಕೊಂಡಾಗ ಮಣ್ಣು ಮುಕ್ಕಿದ ಪ್ರಸಂಗಗಳೇ ಹೆಚ್ಚು. 1961 ಫೆಬ್ರುವರಿ ತಿಂಗಳಲ್ಲಿ ಆದ ಅಷ್ಟಗ್ರಹ ಕೂಟದಿಂದ ಅನಾಹುತವಾಗುತ್ತದೆಂಬ ಭವಿಷ್ಯ ಸುಳ್ಳಿನಕಂತೆಯಾಗಿ ಜ್ಯೋತಿಷಿಯ ಬುಡಕ್ಕೇ ಅಪಾಯ ಒದಗಿತು. ಆದರೂ ಜ್ಯೋತಿಷಿಗಳಿಗೆ ತಿಳಿವಳಿಕೆ ಬಂದಿಲ್ಲ. ಪ್ರಪಂಚದ ಅಗ್ರಗಣ್ಯ ರಾಷ್ಟ್ರಗಳಾದ

ಅಮೆರಿಕಾ ಮುಂತಾದ ದೇಶಗಳಲ್ಲಿಯೂ ಜನಗಳು ಜ್ಯೋತಿಷವನ್ನು ನಂಬು ತ್ತಾರೆ ಎಂದು ನಮ್ಮ ದೇಶದ ಹಲವು ಜ್ಯೋತಿಷಿಗಳು ಹೆಮ್ಮೆಯಿಂದ, ಸಂತೃಪ್ತಿಯಿಂದ ಹೇಳಿಕೊಳ್ಳುತ್ತಾರೆ. ಈ ಮನೋಭಾವದಿಂದ ಜ್ಯೋತಿ ಶ್ಯಾಸ್ತ್ರಕ್ಕೆ ಪುಷ್ಟಿ ಸಿಗುವುದಿಲ್ಲ. ಇದರಿಂದ ವ್ಯಕ್ತವಾಗುವುದು ನಮ್ಮಲ್ಲಿ ನಮಗಿರುವ ಕೀಳುಮಟ್ಟದ ಭಾವನೆ. ಮೂರ್ಖತನ ಮತ್ತು ಮೂಢ ನಂಬಿಕೆ ಯಾವ ಒಂದು ದೇಶದ, ಜನಾಂಗದ ಅಥವಾ ಧರ್ಮದ ಸರ್ವಸ್ವಾಮ್ಯ ವಲ್ಲ.

## ಪವಾಡ

ವೈಜ್ಞಾನಿಕ ದೃಷ್ಟಿಯಂತೆ ಶೂನ್ಯದಿಂದ ವಸ್ತುಗಳನ್ನು ಸೃಷ್ಟಿ ಮಾಡು ವವನು ಸೃಷ್ಟಿಕರ್ತ. ಈ ಮಹತ್ ಕಾರ್ಯದ ಮುಂದೆ ಎಲ್ಲಾ ವಿಜ್ಞಾನಿಗಳ ಸಂಶೋಧನೆಗಳೂ ತುಂಬಾ ಅಲ್ಪವಾದವು. ಈ ಪವಾಡ ಪುರುಷನಿಗೆ ಸಹಜ ವಾಗಿ ಉಳಿದ ಕ್ಷೇತ್ರಗಳಲ್ಲಿಯೂ ಇಂತಹ ಅದ್ಭುತ ಕಾರ್ಯಗಳನ್ನು ಸಾಧಿಸುವ ಶಕ್ತಿ ಇರಬೇಕು. ಪಾಪ! ಉಳಿದ ಬಹು ವಿಷಯಗಳಲ್ಲಿ ಈ ಮಹಾನು ಭಾವನು ಸಾಮಾನ್ಯ ಜನರಷ್ಟೇ ಅಜ್ಞಾನಿ. ಈ ಸೃಷ್ಟಿಕರ್ತನಿಗೆ ತನ್ನ ಭಾಷೆ ಬಿಟ್ಟು ಉಳಿದ ಭಾಷೆಗಳು ತಿಳಿದಿಲ್ಲ. ಈ ಭಗವಂತನಿಗೆ ವಿಜ್ಞಾನದ ವಿಷಯ ಗಳಲ್ಲಿ ಒಬ್ಬ ಹೈಸ್ಕೂಲ್ ವಿದ್ಯಾರ್ಥಿಯ ಅಜ್ಞಾನಕ್ಕಿಂತ ಹೆಚ್ಚಿನದು. ಅಲ್ಲದೆ ತಾನು ಸೃಷ್ಟಿ ಮಾಡುವ ವಸ್ತುಗಳ ಗಾತ್ರ ಯಾವಾಗಲೂ ಮುಷ್ಟಿಯ ಹಿಡಿತಕ್ಕೆ ಸಿಗುವಂತಹವು. ಜೊತೆಗೆ ಇವೆಲ್ಲಾ ಅಂಗಡಿಯಲ್ಲಿ ಸಿಕ್ಕುವ ಮಾಲುಗಳೇ! ಎಲ್ಲಾ ಅದೇ ನಮೂನೆ. ಒಂದು ಚಿಕ್ಕ ಭಾಗವಾದರೂ ವ್ಯತ್ಯಾಸವಿಲ್ಲ. ಹಿಂದೆಯೇ ಅಸ್ತಿತ್ವದಲ್ಲಿದ್ದ ವಸ್ತುಗಳ ಪುನಃ ಪ್ರದರ್ಶನ.

## ಭಯ

ಭಯ ಇಂತಹ ನಂಬಿಕೆಗಳಿಗೆ ಮತ್ತು ಸಂಪ್ರದಾಯಗಳಿಗೆ ಬುನಾದಿ. ಮಗು ಭಯದ ವಾತಾವರಣದಲ್ಲಿಯೇ ಜನ್ಮ ತಾಳುತ್ತದೆ. ತಾಯಿಯ ಹೊಟ್ಟೆಯಲ್ಲಿ ಮಲಗಿ ನಿರ್ವಿಕಲ್ಪ ಸಮಾಧಿಯಲ್ಲಿದ್ದ ಮಗು, ತೀರಾ ಹೊಸ ಸನ್ನಿವೇಶದ ಈ ಪ್ರಪಂಚಕ್ಕೆ ಬಂದಾಗ ಆಗುವ ಮೊದಲ ಅನುಭವ ಭಯ.

ಮಗು ಬೆಳೆಯುವುದೂ ಭಯದ ವಾತಾವರಣದಲ್ಲಿಯೇ. ಸಾಮಾನ್ಯವಾಗಿ ದೊಡ್ಡವರು ಮಕ್ಕಳನ್ನು ಅಂಜುಪುರುಕರನ್ನಾಗಿ ತಿಳಿದೋ ತಿಳಿಯದೆಯೋ ಮಾಡುತ್ತಾರೆ. ಭಯೋತ್ಪಾದನೆಯ ಪ್ರಸಂಗಗಳನ್ನು ಹೇಳುವುದೇ ಹೆಚ್ಚು. "ಅಲ್ಲಿಗೆ ಹೋಗಬೇಡ ಗೊಗ್ಗ ಇದ್ದಾನೆ. ಇಲ್ಲಿ ಗುಮ್ಮ ಇದೆ. ಹುಣಿಸೇಗಿಡದ ಮೇಲೆ ದೆವ್ವ ಇದೆ. ಹಾಳು ಮಂಟಪದಲ್ಲಿ ಪಿಶಾಚಿ ಇದೆ". ಇಂತಹ ಮಾತುಗಳು ಬೆಳೆಯುವ ಮಕ್ಕಳ ಮೇಲೆ ಎಂತಹ ಪ್ರಭಾವವನ್ನುಂಟುಮಾಡಬಹುದೆಂಬುದನ್ನು ನಾವೇ ಯೋಚನೆ ಮಾಡಬೇಕು. ನಾಲ್ಕು ದಶಕಗಳಿಗಿಂತಲೂ ಹಿಂದೆ ನಮ್ಮ ತಾಯಿ ನಮ್ಮೂರಿನ ಮುಂಭಾಗದಲ್ಲಿರುವ ದೆವ್ವಗಳ ಆವಾಸಸ್ಥಾನವೆಂದು ಹೆಸರು ಪಡೆದ ಒಂದು ಹುಣಿಸೇ ಗಿಡದ ಸಮೀಪಕ್ಕೆ ಒಬ್ಬನೇ ಹೋಗಬಾರದೆಂಬ ಎಚ್ಚರಿಕೆಯ ಮಾತು ಈಗಲೂ ಆ ಮರದ ಮುಂದೆ ಹೋದಾಗ ಜ್ಞಾಪಕಕ್ಕೆ ಬರುತ್ತದೆ. ಆದಿ ಮಾನವನ ಮೇಲೆ ಪ್ರಕೃತಿಯ ಶಕ್ತಿಗಳೆಲ್ಲಾ ಭಯೋತ್ಪಾದನೆ ಮಾಡಿದವು. ಧರ್ಮವು ಹುಟ್ಟಿದ್ದೂ ಈ ಸನ್ನಿವೇಶದಲ್ಲಿಯೇ. ಬಸವಣ್ಣನವರ "ದಯೆಯೇ ಧರ್ಮದ ಮೂಲವಯ್ಯ" ಎಂಬ ನುಡಿ ಒಪ್ಪತಕ್ಕದ್ದೇ. ಅಂತೆಯೇ "ಭಯವೇ ಧರ್ಮದ ಮೂಲವಯ್ಯ" ಅನ್ನುವುದರಲ್ಲೂ ಹೆಚ್ಚುಮಟ್ಟಿಗೆ ನಿಜಾಂಶವಿದೆ. ಒಂದೊಂದು ಮನೆಯೂ ತ್ರಿವೇಣಿ ಸಂಗಮ. ತಾತ, ಅಪ್ಪ, ಮಕ್ಕಳ ಒಕ್ಕೂಟ. ತಾತನ ಕಾಲದ ತಾತನ ಬುದ್ಧಿಯಲ್ಲಿ ಹುಟ್ಟಿ ಬೆಳೆದುಬಂದ ಸಂಪ್ರದಾಯಗಳೇ ಮೊಮ್ಮಗನ ಕಾಲಕ್ಕೂ ಸಮಂಜಸವಾದುದು ಎಂದು ಹಟ ಹಿಡಿಯುವುದು ನ್ಯಾಯವಲ್ಲ. ಹಿಂದಿನ ಕಾಲದ್ದೆಲ್ಲಾ ನಿಜವಾಗಬೇಕಾಗಿಲ್ಲ. ಈಗಿನ ಕಾಲದ್ದು ಆದ ಮಾತ್ರಕ್ಕೇ ಆದರ ಬೆಲೆ ಕಡಿಮೆಯಾಗಬೇಕಾಗಿಲ್ಲ. ಕಾಳಿದಾಸನ ಉಕ್ತಿಯಂತೆ

ಪುರಾಣ ಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಕಾವ್ಯಂ ನವಮಿತ್ಯವದ್ಯಂ
ಸಂತಃ ಪರೀಕ್ಷ್ಯಾ ಅನ್ಯತರತ್ ಭಜಂತೆ
ಮೂಢಃ ಪರಪ್ರತ್ಯಯನೇಯ ಬುದ್ಧಿಃ

ಅಂದರೆ ಹಳೆಯದು ಎಂಬ ಕಾರಣದಿಂದಲೇ ಎಲ್ಲವೂ ಸರಿಯಲ್ಲ. ಹೊಸದು ಎಂಬ ಕಾರಣದಿಂದಲೇ ಕಾವ್ಯವನ್ನು ತಿರಸ್ಕರಿಸಬೇಕಾಗಿಲ್ಲ. ಸತ್ಪುರುಷರು

ಯೋಗ್ಯತೆಯನ್ನು ಪರೀಕ್ಷಿಸಿ ಸ್ವೀಕರಿಸುತ್ತಾರೆ. ಆದರೆ ಇತರರ ಅಭಿಪ್ರಾಯದಂತೆ ಎಳೆಯಲ್ಪಡುವ ಬುದ್ಧಿಯುಳ್ಳವನು ಮೂರ್ಖ.

ಬೆಳಿಗ್ಗೆಯಿಂದ ಸಂಜೆಯತನಕ ಅಧೈರ್ಯದ ವಿಷಯಗಳನ್ನು ಹೇಳಿ, ಅರ್ಥವಿಲ್ಲದ ಕರ್ಮಗಳಲ್ಲಿ ಮಕ್ಕಳನ್ನು ತೊಡಗುವಂತೆ ಮಾಡುವುದರಿಂದ ಎಂತಹ ವ್ಯಕ್ತಿತ್ವ ಬೆಳೆಯುವುದೆಂಬುದನ್ನು ನಾವೇ ಊಹಿಸಿಕೊಳ್ಳಬಹುದು. ಇವೆಲ್ಲವೂ ಆತ್ಮವಿಶ್ವಾಸಕ್ಕೆ ಧಕ್ಕೆಯನ್ನುಂಟುಮಾಡುವ ಕಾರ್ಯಗಳು. ಸ್ವಾಮಿ ವಿವೇಕಾನಂದರ ಅಭಿಪ್ರಾಯದಲ್ಲಿ ಯಾವನಿಗೆ ಆತ್ಮ ವಿಶ್ವಾಸವಿಲ್ಲವೋ ಅವನೇ ನಾಸ್ತಿಕ.

## ಮನಸ್ಸಿನ ದುರ್ಬಲತೆ

ವೈಚಾರಿಕ ಪ್ರಜ್ಞೆಯ ಅಭಾವಕ್ಕೆ ಇನ್ನೊಂದು ಬಲವಾದ ಅಡ್ಡಿ ಮನಸ್ಸಿನ ದುರ್ಬಲತೆ. ಎಷ್ಟೇ ಧೈರ್ಯವಂತನಾಗಲಿ, ವಿವೇಚನಾಶಕ್ತಿ ಇರಲಿ ಜೀವನದಲ್ಲಿ ಕಷ್ಟಗಳು ಸಂಭವಿಸಿ ಒಂದಾದ ಮೇಲೊಂದು ಪೆಟ್ಟು ಬಿದ್ದಾಗ ಸಂಶಯಾತ್ಮನಾಗುವ ಸಂಭವವುಂಟು. ಕಾಣದ ಕೈಯ ಸಹಾಯ ಪಡೆಯಲು ಪ್ರಯತ್ನಿಸುತ್ತಾನೆ. ಒಬ್ಬ ನಾಸ್ತಿಕನು ಜೀವನವೆಲ್ಲಾ ನಾಸ್ತಿಕತೆಯನ್ನು ಬೋಧಿಸಿ ಸಾಯುವ ಸಮಯದಲ್ಲಿ ಭಯಪೀಡಿತನಾಗಿ 'O God ! if there is a God, save my Soul if there is a Soul' ಎಂದು ಹೇಳಿ ಪ್ರಾಣಬಿಟ್ಟನಂತೆ. ಅವನ ಈ ಹೇಳಿಕೆ ಆತನ ಮನಸ್ಸಿನ ಡೋಲಾಯಮಾನ ಸ್ಥಿತಿಯನ್ನು ಸೂಚಿಸುತ್ತದೆ. ಮೂಢ ನಂಬಿಕೆಗಳು ಸಂಶಯ ಮನೋಭಾವಕ್ಕೆ ಪ್ರೋತ್ಸಾಹವನ್ನುಂಟುಮಾಡುತ್ತವೆ. ವಿದ್ಯಾವಂತ ತಾರ್ಕಿಕವಾದಿ ಜೀವನದಲ್ಲಿ ಏಟು ತಿಂದ ಮೇಲೆ ಎಷ್ಟೋ ಸಲ ಅವನ ವಿವೇಚನಾ ಶಕ್ತಿ ಊಹಿಸಲಾರದಷ್ಟು ಕಡಿಮೆಯಾಗಿ ಹೇಳಿದ್ದನ್ನೆಲ್ಲಾ ನಂಬುವ ಮಟ್ಟಕ್ಕೆ ಇಳಿಯುತ್ತಾನೆ. ಅವನ ನಂಬಿಕೆಗಳಲ್ಲಿ ಏನಾದರೊಂದು ಅಕಸ್ಮಾತ್ತಾಗಿ ಕಾಕತಾಳೀಯವಾಗಿ ನಿಜವಾದರೆ ಆ ಮೂಢನಂಬಿಕೆಗಳಿಗೆಲ್ಲಾ ಮತ್ತಷ್ಟು ಪುಷ್ಟಿ ಬರುತ್ತದೆ. ನಿಜವಾದ ಘಟನೆಯನ್ನು ಡಂಗುರ ಹೊಡೆಯುತ್ತಾನೆ. ಸುಳ್ಳಾದ ಘಟನೆಗಳ ಕಡೆ ಅಷ್ಟಾಗಿ ಗಮನ ಹೋಗುವುದಿಲ್ಲ.

ಗಮನ ಹೋದಾಗ್ಯೂ ಸಮಯಕ್ಕೆ ತಕ್ಕ ವಿಶ್ಲೇಷಣೆಯನ್ನು ಕೊಟ್ಟು ಸುಳ್ಳಾದ ಘಟನೆಗಳನ್ನು ತಳ್ಳಿ ಹಾಕುತ್ತಾನೆ.

## ಡೊಂಬರಲಾಗ

ವಿದ್ಯಾಭ್ಯಾಸ ಪದ್ಧತಿಯೂ ಶುದ್ಧವಾದ ವಿವೇಚನಾ ಮಾರ್ಗವನ್ನು ಹೇಳಿಕೊಡುತ್ತಿಲ್ಲ. ಈ ವಿಜ್ಞಾನಯುಗದಲ್ಲೂ ಕೂಡ ವೈಚಾರಿಕ ಮನೋಭಾವ ಎಷ್ಟರ ಮಟ್ಟಿಗೆ ಪ್ರಗತಿ ಹೊಂದಬೇಕೋ ಅಷ್ಟು ವಿಜ್ಞಾನಿಗಳಲ್ಲೂ ಹೊಂದಿಲ್ಲ. ವೇದಾಂತ ಪ್ರಾಧ್ಯಾಪಕ ಸಾಮಾನ್ಯವಾಗಿ ಜೀವನದಲ್ಲಿ ವೇದಾಂತಿಯಲ್ಲ. ವೇದಾಂತ ಪಾಠ ಮಾಡುವುದು ಹೊಟ್ಟೆಪಾಡಿಗೆ ಒಂದು ಮಾರ್ಗ. ಹಾಗೆಯೇ ಬಹು ವಿಜ್ಞಾನಿಗಳು ವಿಜ್ಞಾನವನ್ನು ಜೀವನೋಪಾಯಕ್ಕೆ ಮಾತ್ರ ಉಪಯೋಗಿಸಿಕೊಂಡಿದ್ದಾರೆ. ವೈಜ್ಞಾನಿಕ ಮನೋಭಾವ ತುಂಬಾ ಕಡಿಮೆ. ತರಗತಿಯಲ್ಲಿ ಗ್ರಹಣಗಳಾಗುವ ಬಗೆಯನ್ನು ವೈಜ್ಞಾನಿಕ ರೀತ್ಯಾ ಬೋಧನೆ ಮಾಡುತ್ತಾರೆ. ಆದರೆ ಮನೆಯಲ್ಲಿ ಮಾಡುವ ಆಚರಣೆಗಳಲ್ಲಿ ಸೂರ್ಯ ಚಂದ್ರರಿಗೆ ರಾಹು ಕೇತುಗಳ ಕಾಟ ತಪ್ಪಿಲ್ಲ. ಮಾನವ ಚಂದ್ರಗ್ರಹಕ್ಕೆ ಹೋಗಿ ಪದಾರ್ಪಣೆ ಮಾಡಿ ಬಂದ ಮೇಲೂ ಇನ್ನೂ ಚಂದ್ರನು ಈ ಅನಿಷ್ಟದಿಂದ ಪಾರಾಗಿಲ್ಲ. ವಿದ್ಯಾವಂತ ಮೂಢ ನಂಬಿಕಸ್ಥನು ಅವಿದ್ಯಾವಂತ ಮೂಢ ನಂಬಿಕಸ್ಥನಿಗಿಂತ ದೇಶಕ್ಕೆ ಮತ್ತು ಸಮಾಜಕ್ಕೆ ಹೆಚ್ಚು ಅಪಾಯವನ್ನುಂಟುಮಾಡುತ್ತಾನೆ. ಸಂಶೋಧನೆಗಳಲ್ಲಿ, ಪಾಂಡಿತ್ಯದಲ್ಲಿ ಒಳ್ಳೆಯ ಸ್ಥಾನವನ್ನು ಗಳಿಸಿದ ವಿಜ್ಞಾನಿ ಜೀವನದಲ್ಲಿ ಪೆಟ್ಟು ಬಿದ್ದಾಗ ಜ್ಯೋತಿಷಿಯ ಹಿಂದೆಯೋ ಮಾಂತ್ರಿಕನ ಹಿಂದೆಯೋ ಕಣ್ಣು ಮುಚ್ಚಿಕೊಂಡು ಹೋಗುತ್ತಾನೆ. ಪ್ರಯೋಗ ಶಾಲೆಯಲ್ಲಿ ವಿಜ್ಞಾನದ ಮುಖವಾಡವನ್ನು ಧರಿಸಿ ಮನೆಯಲ್ಲಿ ಅಜ್ಞಾನದ ಕುನ್ನಿಯಾಗುವ ಈ ಡೊಂಬರಲಾಗವೇ ಅತ್ಯಂತ ಶೋಚನೀಯವಾದ ವಿಷಯ.

## ವ್ಯವಸ್ಥಿತ ಪ್ರಯತ್ನ

ಶಿಕ್ಷಣ ಕ್ಷೇತ್ರದಲ್ಲಿ ಈ ವಿಷಯಗಳ ಚರ್ಚೆಯಿಲ್ಲ. "ವಾದೇ ವಾದೇ ಜಾಯತೇ ತತ್ವ ಬೋಧಃ"—ಜಿಜ್ಞಾಸೆಯಿಂದ ಜ್ಞಾನಪ್ರಾಪ್ತವಾಗುತ್ತದೆಂಬ

ಈ ಸುಭಾಷಿತದ ವ್ಯಾಪ್ತಿಯನ್ನು ಹೆಚ್ಚಿಸಿ ಜೀವನದ ಎಲ್ಲಾ ಕ್ಷೇತ್ರಗಳ
ಎದುರಿಸಬೇಕಾದ ಸಮಸ್ಯೆಗಳನ್ನು ಸಮಗ್ರ ದೃಷ್ಟಿಯಿಂದ ಕೋಪತಾಪಗಳಿ
ಆವೇಶವಿಲ್ಲದೆ, ಪಟ್ಟಭದ್ರಹಿತಗಳಿಗೆ ಒಳಗಾಗದೆ, ನಿಸ್ವಾರ್ಥತೆಯಿಂದ ಕೇ
ಸತ್ಯವನ್ನು ತಿಳಿಯುವುದಕ್ಕಾಗಿ ಚರ್ಚೆ ಮಾಡುವ ಮನೋಭಾವವನ್ನು ಶಿಕ್ಷ
ಕ್ಷೇತ್ರದಲ್ಲಿ ಮತ್ತು ಮನೆಯಲ್ಲಿ ಕಲ್ಪಿಸಬೇಕಾದದ್ದು ಬಹುಮುಖ್ಯ.

ಎಷ್ಟೋ ಮಂದಿಗೆ ಯೋಚನೆ ಮಾಡುವುದಕ್ಕೇ ತುಂಬಾ ಭಯವಾ
ತ್ತದೆ. ಎಲ್ಲಿ ತಮ್ಮ ಮೂಢ ನಂಬಿಕೆಗಳು ಅಸಂಗತವಾಗಿ ಕಷ್ಟಕಾಲದ
ಆಧಾರ ಸ್ಥಂಭಗಳಾಗುವುದಿಲ್ಲವೋ ಎಂಬ ಭೀತಿ. ಇಂಗ್ಲೀಷಿನ ಗಾದೆಯ
" Where ignorance is bliss, it is folly to be wise
ಅಂದರೆ ಎಲ್ಲಿ ಮೌಢ್ಯತೆಯೇ ಆನಂದವೋ ಅಲ್ಲಿ ಜಾಣತನವೇ ಅವಿವೇಕವಾ
ತ್ತದೆ. ಸಾಮಾನ್ಯವಾಗಿ ಮನುಷ್ಯನು ಜೀವನದಲ್ಲಿ ಸಮಸ್ಯೆಗಳನ್ನು ಎದುರಿ
ವುದಕ್ಕಿಂತ ಹೆಚ್ಚಾಗಿ ಕನಿಷ್ಟ ಕಷ್ಟದ ಮಾರ್ಗವನ್ನು (Path of lea
resistance) ಅನುಸರಿಸುತ್ತಾನೆ. ಆದುದರಿಂದ ಅನಾದಿ ಕಾಲದಿ
ಬಂದಮೂಢ ನಂಬಿಕೆ, ಅರ್ಥವಿಲ್ಲದ ಸಂಪ್ರದಾಯಗಳು ವ್ಯವಸ್ಥಿತ ಪ್ರಯ
ವಿಲ್ಲದಿದ್ದರೆ ಯಥಾಸ್ಥಿತಿಯಲ್ಲಿ ಉಳಿಯುವ ಸಂಭವವೇ ಹೆಚ್ಚು. ಪ್ರಾಚೀ
ಮಾನವನು ಮಾಡುತ್ತಿದ್ದ ಅಸಂಖ್ಯಾತ ಅರ್ಥಹೀನ ಕರ್ಮಗಳಿಗಿಂತ
ವಿಜ್ಞಾನ ಯುಗದ ಮನುಷ್ಯನ ಕರ್ಮಗಳು ಶ್ರೇಷ್ಠವೆಂದು ಹೇಳಲಾಗುವುದಿ
ಹಿಂದೆ ಆ ಕರ್ಮಗಳು ಒಡ್ಡೊಡ್ಡಾಗಿ ಆಚರಿಸಲ್ಪಡುತ್ತಿದ್ದವು. ಈಗ ನಾ
ಅವುಗಳಿಗೆ ಕೊಟ್ಟಿರುವುದು ಶುಭ್ರವಾದ ಹೊದಿಕೆ.

## ವಿಜ್ಞಾನಿಯ ಸಾಧನೆ

ವಿಜ್ಞಾನ ಭೌತಿಕ ಪ್ರಪಂಚದಲ್ಲಿ ಔನ್ನತ್ಯದ ಸ್ಥಾನವನ್ನು ಪಡೆದಿ
ವಿಜ್ಞಾನಿ ಅಣುಪರಮಾಣುಗಳ, ಗ್ರಹ ಉಪಗ್ರಹಗಳ ಗುಣಗಳನ್ನು ವಿಮರ್ಶಿ
ದ್ದಾನೆ. ನಕ್ಷತ್ರಗಳ ಹುಟ್ಟು, ಬೆಳವಣಿಗೆ, ಸಾವುಗಳನ್ನು ತಕ್ಕಮಟ್ಟ
ತಿಳಿದುಕೊಂಡಿದ್ದಾನೆ. ಚಂದ್ರನನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂ
ಉಳಿದ ಕೆಲವು ಗ್ರಹಗಳಿಗೂ ಭೇಟಿ ಕೊಡುವ ಕೆಚ್ಚೆದೆಯ ಆಸೆಯನ್ನು ವ್ಯ
ಪಡಿಸಿದ್ದಾನೆ. ಆತ್ಮದ 'ಆವಾಸ ಸ್ಥಾನವಾದ' ಹೃದಯವನ್ನೇ ಯಶ

ಯಾಗಿ ಬದಲಾಯಿಸಿದ್ದಾನೆ. ಜೀವ ಮೂಲಾಣುವಾದ "ಜೀನ್" ಅನ್ನು ತಯಾರಿಸಿ "ಇಗೋ! ಪ್ರಯೋಗಶಾಲೆಯಲ್ಲಿ ಜೀವವನ್ನೇ ಸೃಷ್ಟಿಸುತ್ತೇನೆ" ಎಂದು ಆತ್ಮ ವಿಶ್ವಾಸದ ಮುಗುಳ್ನಗೆಯನ್ನು ಬೀರುತ್ತಾನೆ.

## ಮೂಲ ಪ್ರಶ್ನೆ

ವಿಜ್ಞಾನಿ ಇಷ್ಟು ಯಶಸ್ಸನ್ನು ಸಾಧಿಸಿದ್ದಾಗ್ಯೂ ಅವನನ್ನು ಕೆಲವು ಗಾಢವಾದ ಸಮಸ್ಯೆಗಳು ಕಾಡುತ್ತಿವೆ. ಅಣುವಿನ ಗುಣಗಳನ್ನು ಪಟ್ಟಿ ಮಾಡಿದಾಗ್ಯೂ ಅಣು ಹೇಗೆ ಬಂದಿತೆಂಬ ಮೂಲ ಪ್ರಶ್ನೆಗೆ ವಿಜ್ಞಾನಿಯಿಂದ ಉತ್ತರವಿಲ್ಲ. ಉಳಿದ ಯಾರಿಂದಲೂ ಸಮಂಜಸವಾದ ಉತ್ತರ ಸಿಕ್ಕಿಲ್ಲ. ಪ್ರಕೃತಿಯ ಹಲವು ಕ್ರಿಯೆಗಳು ವಿಜ್ಞಾನಿಯನ್ನು ದಂಗುಬಡಿಸಿವೆ. ಅಣುವಿನಲ್ಲಿ ಆಗುತ್ತಿರುವ ಲೀಲೆಯೇ ಸಾಕು! ಮೂಲ ಕಣಗಳ (Fundamental particles) ಸಂಖ್ಯೆ ದಿನೇ ದಿನೇ ಹೆಚ್ಚಾಗಿ ವಿಜ್ಞಾನಿಯು ಹತಾಶನಾಗಿದ್ದಾನೆ.

ಮಾನವನ ಪಂಚೇಂದ್ರಿಯಗಳ ಅನುಭವಕ್ಕೆ ಸಿಕ್ಕುವ ಪ್ರಪಂಚವೇ ನೈಜವಾದದ್ದು ಎಂದು ಹೇಳುವುದಕ್ಕಾಗುವುದಿಲ್ಲ. ಯಾವುದು ವಸ್ತುವೋ, ಯಾವುದು ಶಕ್ತಿಯೋ; ಯಾವುದು ಸ್ಥಿರವೋ. ಯಾವುದು ಅಸ್ಥಿರವೋ; ಯಾವುದು ನಿಜವೋ, ಯಾವುದು ಭ್ರಾಂತಿಯೋ; ಯಾವುದು ಗೋಚರವೋ, ಯಾವುದು ಅಗೋಚರವೋ ಈ ಸಮಸ್ಯೆಗಳು ವಿಜ್ಞಾನಿಯನ್ನು ದಿಗ್ಭ್ರಾಂತನನ್ನಾಗಿ ಮಾಡಿವೆ. "ನಾನು ಯಾರು?" ಎಂಬ ಪ್ರಶ್ನೆ ಎಲ್ಲ ಬುದ್ಧಿಜೀವಿಗಳನ್ನು ಸತತವಾಗಿ ಪೀಡಿಸುತ್ತಿದೆ. ತಪಸ್ಸು ಒಂದು ಆಧ್ಯಾತಿಕ ಚಿಂತನೆ. ಇಂತಹ ತಪಸ್ಸಿನಿಂದ ಬುದ್ಧಿಜೀವಿಗೆ ವಿಶೇಷ ಪ್ರಜ್ಞೆ ಪ್ರಾಪ್ತವಾಗುವುದಿಲ್ಲವೆಂದು ಹೇಳಲಾಗುವುದಿಲ್ಲ.

ಪ್ರಕೃತಿಯ ಒಂದೊಂದು ಕ್ರಿಯೆಯಲ್ಲಿಯೂ ಒಂದೊಂದು ತತ್ತ್ವವಿದೆ. ವಿಶ್ವದಲ್ಲಿ ಭೂಮಿ ಒಂದು ಧೂಳಿನ ಕಣಕ್ಕೆ ಸಮ. ಭೂಮಿಯ ಮೇಲೆ ಮಾತ್ರ ಅಕಸ್ಮಾತ್ತಾಗಿ ಜೀವ ಹುಟ್ಟಿತೆನ್ನುವುದು ನ್ಯಾಯವಲ್ಲ. ಕೂಲಂಕಷವಾಗಿ ವಿಮರ್ಶೆ ಮಾಡಿದಾಗ ಪ್ರಕೃತಿಯಲ್ಲಿ ಯಾವುದೂ ಆಕಸ್ಮಿಕವಾಗಿ ಕಾಣು

ವುದಿಲ್ಲ. ವಿಶ್ವದಲ್ಲಿ ಎಲ್ಲೆಲ್ಲಿ ಜೀವ ಸೃಷ್ಟಿಗೆ, ಪೋಷಣೆಗೆ ಅನುಕೂಲ ವಾತ ವರಣವಿದೆಯೊ ಅಲ್ಲೆಲ್ಲಾ ಜೀವ ಹುಟ್ಟಬೆಳೆದಿರಬೇಕು. ವಿಶ್ವದಲ್ಲಿ ನಾ ಒಬ್ಬಂಟಿಗರಲ್ಲ. ಸಾವೇ ಜೀವನದ ಕೊನೆಯೆಂದು ಭಾವಿಸುವುದು ಸಾಧುವಲ್ಲ.

ವಿಜ್ಞಾನಿಗೆ ವೈಜ್ಞಾನಿಕ ಮಾರ್ಗದ ಇತಿ ಮಿತಿಗಳು ಗೊತ್ತಿಲ್ಲದೆ ಇ ಎಲ್ಲಾ ಮೂಲ ಸಮಸ್ಯೆಗಳನ್ನು ಕೇವಲ ತರ್ಕದಿಂದಲೇ ತಿಳಿದುಕೊ ಬಹುದೆಂದು ವಿಜ್ಞಾನಿ ಭಾವಿಸಿಲ್ಲ. ಅಂತಃಪ್ರಜ್ಞೆ (Intuition) ಅನುಭವ ಆತನಿಗಿದೆ. ಉಪನಿಷತ್ ವಾಕ್ಯಗಳಂತೆ

" ನಾಯಮಾತ್ಮಾ ಪ್ರವಚನೇನ ಲಭ್ಯಃ
ನ ಮೇಧಯಾ ನ ಬಹುನಾ ಶ್ರುತೇನ "

" ನೈಷಾ ತರ್ಕೇಣ ಮತಿಃ ಆಪನೇಯಾ "

ಅಂದರೆ ಆತ್ಮಜ್ಞಾನವನ್ನು ಕೇವಲ ಪಾಂಡಿತ್ಯ, ಬುದ್ಧಿ, ಪ್ರವಚನ ಮತ್ತ ತರ್ಕಗಳಿಂದ ಪಡೆಯಲು ಸಾಧ್ಯವಿಲ್ಲ.

ವಿಜ್ಞಾನಿಗೆ ಅಂತಃ ಪ್ರಜ್ಞೆಯ ಅರಿವು, ತರ್ಕದ ಇತಿ ಮಿತಿ, ಆಧ್ಯಾ ಮಾರ್ಗದ ಸಾಧ್ಯತೆಗಳಲ್ಲಿ ನಂಬಿಕೆ—ಇವುಗಳು ಈ ಲೇಖನದಲ್ಲಿ ವಿವರಿಸಲ್ಪ ಅಸಂಖ್ಯಾತ ಮೂಢ ನಂಬಿಕೆಗಳಿಗೆ, ಅರ್ಥವಿಲ್ಲದ ಸಂಪ್ರದಾಯಗಳಿ ಸಂಕುಚಿತ ಧರ್ಮಗಳಿಗೆ, ಶೋಷಣೆಯ ಮನೋಭಾವಕ್ಕೆ ಪುಷ್ಠಿ ಕೊಡುವುದಿ

ಪ್ರಕೃತಿಯ ಎಲ್ಲ ಘಟನೆಗಳನ್ನೂ ಸಾವಧಾನವಾಗಿ ಪರಿಶೀಲಿಸಿದಾ ಇವೆಲ್ಲಾ ಒಂದು ಮೂಲ ನಿಯಮಕ್ಕೆ ಬದ್ಧವಾದ ಹಾಗೆ ತೋಚುತ್ತ ಈ ಮೂಲ ನಿಯಮ ಜಡ ನಿಯಮವೇ ಅಥವಾ ಇದಕ್ಕೆ ಪ್ರಜ್ಞೆ ಇದೆ ಎನ್ನುವುದೇ ದೊಡ್ಡ ಸಮಸ್ಯೆ. ಇದೊಂದು ಜಡ ನಿಯಮವಾದರೆ ಜೀವನ ಅನೇಕ ಸಮಸ್ಯೆಗಳಿಗೆ ಸಮಂಜಸವಾದ ವಿಶ್ಲೇಷಣೆ ಕೊಡುವುದಕ್ಕಾಗುವುದಿ ಪ್ರಜ್ಞಾಪೂರ್ಣವಾದ ವಿಶ್ವನಿಯಮದ ಅಸ್ತಿತ್ವಕ್ಕೆ ವೈಚಾರಿಕ ಮನೋ ಭಾವ ಪುಷ್ಟಿ ಕೊಡುತ್ತದೆ.

ಪಾರಮಾರ್ಥಿಕ ಪ್ರಪಂಚದಲ್ಲಿ ಅತಾರ್ಕಿಕ ಮನೋಭಾವ ಅಸಾ ಗೊಂದಲವನ್ನುಂಟುಮಾಡಿದೆ. ಕೇವಲ ವೈಚಾರಿಕ ಪ್ರಜ್ಞೆಯಿಂದ

ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸತ್ಯದ ಅನುಭವವಾಗುತ್ತದೆ ಎಂದು ಘಂಟಾ ಘೋಷವಾಗಿ ಹೇಳುವುದಕ್ಕೆ ಕಷ್ಟವಾದರೂ, ವೈಚಾರಿಕ ಪ್ರಜ್ಞೆ ಅನೇಕ ವಿರೋಧಾಭಾಸದ ತೊಡಕುಗಳನ್ನು ಬಿಡಿಸಿ, ಕಲುಷಿತವಲ್ಲದ, ಅತ್ಯಂತ ಶುದ್ಧವಾದ ವಾತಾವರಣವನ್ನು ನಿರ್ಮಿಸಿ, ಈ ವಿಶ್ವದ ನಿಗೂಢ ರಹಸ್ಯವನ್ನು ತಿಳಿದುಕೊಳ್ಳಲು ಉಪಯೋಗಿಸಬಹುದಾದ ಅತ್ಯಂತ ಶ್ರೇಷ್ಠವಾದ ಮಾರ್ಗ.

"ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್
ನ ಬ್ರೂಯಾತ್ ಸತ್ಯಮಪ್ರಿಯಂ
ಪ್ರಿಯಂ ಚ ನಾನೃತಂ ಬ್ರೂಯಾತ್
ಏಷ ಧರ್ಮಸ್ಸನಾತನಃ"

ಸತ್ಯವನ್ನು ಹೇಳಬೇಕು. ಪ್ರಿಯವಾದದ್ದನ್ನು ಹೇಳಬೇಕು. ಸತ್ಯವನ್ನು ಅಪ್ರಿಯವಾಗಿ ಹೇಳಬಾರದು. ಪ್ರಿಯವಾದ ಸುಳ್ಳನ್ನು ಹೇಳಬಾರದು. ಇದು ಸನಾತನ ಧರ್ಮ.

ಈ ಸನಾತನ ಧರ್ಮದ ನಿಯಮಗಳು ಈ ಲೇಖನದಲ್ಲಿ ಉಲ್ಲಂಘನೆಯಾಗಿಲ್ಲವೆಂದು ಆಶಿಸುತ್ತೇನೆ.

[1970ನೆಯ ಇಸವಿ ಆಗಸ್ಟ್ ತಿಂಗಳಲ್ಲಿ ಆದ ಆಕಾಶವಾಣಿ ಪ್ರಸಾರ. ಅನಂತರ ಲೇಖನ ಮಾಲೆಯಾಗಿ 'ಪ್ರಜಾವಾಣಿ' ಪತ್ರಿಕೆಯಲ್ಲಿ ಪ್ರಕಟವಾಯಿತು.]

---

The mind that questions and questions with a serious intent and purpose, and tests and verifies the answers it gets, has a dynamic quality about it which enables it to forge ahead in the world of thought and things.

Swami Ranganathananda
—'ETERNAL VALUES FOR A CHANGING SOCIETY'
(*Page 177*)

---

PRINTED AT THE B.B.D. POWER PRESS AND THE NATIONAL COLLEGE PRESS

" ಧರ್ಮಸ್ಯ ಫಲಮಿಚ್ಛನ್ತಿ ಧರ್ಮಂ ನೇಚ್ಛನ್ತಿ ಮಾನವಾಃ "
(ಮನುಷ್ಯರು ಧರ್ಮದ ಫಲವನ್ನು ಅಪೇಕ್ಷಿಸುತ್ತಾರೆ. ಆದರೆ ಧರ್ಮವನ್ನು ಆಚರಿಸಲು ಬಯಸುವುದಿಲ್ಲ.)

—ವಿದುರ ಧೃತರಾಷ್ಟ್ರನಿಗೆ ಹೇಳಿದ್ದು

We must conclude that the attention and respect accorded to science is directed wholly to its results, and its spirit is the most unpopular thing in the modern world. Yet it could very reasonably be claimed that it is in its spirit that the chief value of science resides.

J. W. N. Sullivan – 'LIMITATIONS OF SCIENCE'
(*Page 164*)

Those that get a living by calculation of the stars by such art and other lying tricks are to be avoided.

Buddha – 'VINAYAPITAKA'

Star-gazing and astrology, forecasting lucky or unfortunate events by signs, prognosticating good or evil, all these are things forbidden.

'THE GOSPEL OF BUDDHA'

Fearlessness is the first prerequisite of spirituality. A coward can never have any morals.

—MAHATMA GANDHI

